

# ಇಂದ್ರ

ವೇದ ಪುರಾಣಗಳಲ್ಲಿ 'ಇಂದ್ರ' ಎಂಬ ಮಾತು ತುಂಬಾ ಬರುತ್ತದೆ. ಇಂದ್ರ ಎಂಬವನು ವೇದ ಕಾಲದಲ್ಲಿಯೋ, ಅದಕ್ಕಿಂತಲೂ ಪೂರ್ವದಲ್ಲಿಯೋ ಇದ್ದಿರಬಹುದು. ಕಾಲಕ್ರಮದಲ್ಲಿ ಇಂದ್ರತ್ವ ಎಂಬುದೊಂದು ಪದವಿಯಾಗಿ ಚಲಾವಣೆಗೆ ಬಂದಿತು. ಆ ಪದವಿಯನ್ನು ನಿರ್ವಹಿಸಿದವರಲ್ಲಿ ಸುಶಾಂತ, ವಿಭು, ಮನೋಜವ; ಬೇಗದಲ್ಲೇ ಭ್ರಷ್ಟನಾಗಿ ಹೋದ ನಹುಷನೂ ಇದ್ದಾರೆ. ಇನ್ನೂ ಹಲವರು ಇಂದ್ರತ್ವದಲ್ಲಿ ಇದ್ದಿರಬಹುದು. ನೂರು ಯಾಗಗಳನ್ನು ಮಾಡಿದವರು ಇಂದ್ರ ಪದವಿಗೆ ಅರ್ಹರು.

ಹೀಗೆ ಇಂದ್ರತ್ವದಲ್ಲಿದ್ದವರೆಲ್ಲ ಇಂದ್ರರೆನಿಸಿದರೂ ವೇದಕಾಲದ ಇಂದ್ರನಿಗೂ ಪುರಾಣಕಾಲದ ಇಂದ್ರನಿಗೂ ತುಂಬಾ ವ್ಯತ್ಯಾಸಗಳು ಕಾಣುತ್ತವೆ. ಆದುದರಿಂದ ವೇದಕಾಲದ ಇಂದ್ರನನ್ನು ಕುರಿತೂ, ಪುರಾಣಕಾಲದ ಇಂದ್ರನನ್ನು ಕುರಿತೂ ವಿವರಗಳನ್ನು ಪ್ರತ್ಯ ಪ್ರತ್ಯೇಕವಾಗಿ ತಿಳಿದುಕೊಳ್ಳುವುದು ಒಳ್ಳೆಯದು.

ವೇದಕಾಲದ ಭಾರತೀಯರಿಗೆ ಇಂದ್ರನು ಸರ್ವೋತ್ತಮನಾದ ಆರಾಧ್ಯ ದೈವವಾಗಿದ್ದನು. ಋಗ್ವೇದದಲ್ಲಿ ಇಂದ್ರನ ಸ್ತುತಿ ಪರವಾಗಿ ಇನ್ನೂರೈವತ್ತು ಸೂಕ್ತಗಳಿವೆಯಂತೆ. ಮತ್ತೆ ಐವತ್ತು ಸೂಕ್ತಗಳಲ್ಲಿ ಪಾಕ್ಷಿಕವಾಗಿ ಇಂದ್ರನ ಹೊಗಳಿಕೆಯೇ.

ಇಂದ್ರ ಶಬ್ದವು ಆರ್ಯರು ಇರಾನಿನಿಂದ ಭಾರತ ದೇಶಕ್ಕೆ ಬರುವುದಕ್ಕೆ ಮೊದಲೇ ಅಸ್ತಿತ್ವದಲ್ಲಿತ್ತು. "ಇನ" ಅಥವಾ "ಇನ್" ಎಂಬ ಪ್ರಕಾಶ ಶಬ್ದದಿಂದ "ಇಂದ್ರ" ಶಬ್ದ ಹುಟ್ಟಿರಬಹುದು. ಇಂದ್ರನು ಮುಖ್ಯವಾಗಿ ವಜ್ರಧಾರಿಯಾದವನು. ನಗರಗಳನ್ನು ಧ್ವಂಸಮಾಡುವ ಶಕ್ತಿಯುಳ್ಳ ಪುರಂದರನು, ದಾನವರನ್ನು ನಾಶಮಾಡುವವನು. ನೀರುಗಳಿಗಿರುವ ನಿರ್ಬಂಧಗಳನ್ನೆಲ್ಲ ತೊಲಗಿಸುವಂಥವನು.

ವೇದಗಳು ಇಂದ್ರನ ಅಂಗಾಂಗಗಳನ್ನು ಕೂಡಾ ವರ್ಣನೆ ಮಾಡುತ್ತವೆ. ಅವನಿಗೆ ತಲೆಯೂ, ಶರೀರವೂ, ಕೈಗಳೂ ಬಲವಾಗಿರುತ್ತವೆ. ಸೋಮಪಾನವು ಅವನಿಗೆ ತುಂಬಾ ಇಷ್ಟ. ಸೋಮಪಾನ ಮಾಡುವ ಸಂದರ್ಭದಲ್ಲಿ ಅವನ ಉದರಭಾಂಡವು ಹೇಗಾಗುವುದೆಂಬುದನ್ನು ಅನೇಕಸಾರಿ ವರ್ಣಿಸಲ್ಪಟ್ಟಿದೆ. ಅವನ ತುಟಿಗಳು "ಸುಶಿಪ್ರ" ಎಂದು ಪ್ರತ್ಯೇಕವಾಗಿ ವರ್ಣಿಸಲ್ಪಟ್ಟಿವೆ. ಅವನ ಗಡ್ಡವು



ಉದ್ರೇಕವಾದಾಗ ವೇಗವಾಗಿ ಕದಲುತ್ತ ಆಡುವುದಂತೆ. ಅವನ ಕೇಶಗಳು ಕಪಿಲವರ್ಣವಾಗಿರುತ್ತವೆ. ಅವನ ಶರೀರವೇ "ಹರಿವರ್ಣ"ವೆಂದು ಕಪಿಲ ವರ್ಣವನ್ನೇ ಸೂಚಿಸುತ್ತದೆ. ಕೆಲವು ಕಡೆಗಳಲ್ಲಿ ಅವನ ಶರೀರದ ವರ್ಣವು ಬಂಗಾರದ ಛಾಯೆಯೆಂತಲೂ ಹೇಳುತ್ತದೆ. ಅವನ ಕೈಗಳು ದೀರ್ಘವಾದುವು; ಬಲಿಷ್ಠವಾದುವು; ಸುಂದರವಾದುವು. ಅವನು ಕಾಮರೂಪಿಯಾದವನು.

ಇಂದ್ರನ ಪ್ರತ್ಯೇಕ ಶಕ್ತಿಯಾದ ವಜ್ರಾಯುಧವು ತ್ವಷ್ಟನಿಂದಲೋ, ಕಾವ್ಯೋಶನನೆಂಬವನಿಂದಲೋ ಅವನಿಗೆ ಲಭಿಸಿರುತ್ತದೆ. ವಜ್ರಾಯುಧವನ್ನು ಇಂದ್ರನಿಗೆ ದೇವತೆಗಳು ಕೊಟ್ಟರೆಂದು ಐತರೇಯ ಬ್ರಾಹ್ಮಣದಲ್ಲಿ ಹೇಳಿರುತ್ತದೆ. ಅವನ ವಜ್ರಾಯುಧದ ವರ್ಣನೆಗಳು ಬಗೆಬಗೆಯಾಗಿವೆ. ಅದು ಲೋಹದಿಂದಾದುದೆಂದು "ಅಯಸಂ" ಎಂಬ ಶಬ್ದದಿಂದ ತಿಳಿಯುತ್ತದೆ. ಬಂಗಾರದಿಂದಾದುದೆಂದೂ ಹೇಳುತ್ತದೆ. ಅದಕ್ಕೆ ನಾಲ್ಕು ಕೋಣಗಳಿರುತ್ತವೆ; ಕೆಲವು ಕಡೆ ನೂರು ಕೋಣಗಳೆಂದೂ ಹೇಳಿದೆ. ಸಾವಿರ ಮೊನೆಗಳಿವೆ. ಹರಿತವಾಗಿದೆ. "ಅಶ್ಮನ್ ಪರ್ವತ" ಎಂದರೆ ಕಲ್ಲಿನಿಂದಾದುದೆಂದೂ ಹೇಳಲ್ಪಟ್ಟಿದೆ.

ಇಂದ್ರನಿಗೆ ಧನುರ್ಬಾಣಗಳು ಕೂಡಾ ಇವೆ. ಬಾಣಗಳು ಬಂಗಾರದುವು. ಅವಕ್ಕೆ ನೂರು ಮೊನೆಗಳಿವೆ. ಸಾವಿರ ಗರಿಗಳಿಂದ ಕೂಡಿದಂಥವು. ಇವು ಮಾತ್ರವಲ್ಲದೆ ಇಂದ್ರನು ಒಂದು ಅಂಕುಶವನ್ನೂ, ಅಥರ್ವವೇದದಲ್ಲಿ ಒಂದು ಬಲೆಯನ್ನೂ ಸಹ ಉಪಯೋಗಿಸಿಕೊಳ್ಳುತ್ತಾನೆ.

ಇಂದ್ರನ ರಥವು ಮನೋವೇಗವನ್ನೂ ಸಹ ಮೀರಿಸುವಂಥಾದ್ದು. "ರಥಸ್ಥಾ" ಎಂಬ ಮಾತನ್ನು ಇಂದ್ರನೆಂಬ ಅರ್ಥದಲ್ಲಿ ಪ್ರತ್ಯೇಕವಾಗಿ ಉಪಯೋಗಿಸಲ್ಪಟ್ಟಿದೆ. ಇಂದ್ರನ ರಥವನ್ನು ಹರಿವರ್ಣವುಳ್ಳ, ಎರಡು ಕುದುರೆಗಳು ಎಳೆಯುತ್ತವೆ. ಅಲ್ಲಲ್ಲಿ ಈ ಕುದುರೆಗಳ ಸಂಖ್ಯೆ ನೂರು, ಸಾವಿರ, ಹನ್ನೊಂದು ನೂರು ಎಂದೂ ಹೇಳಲ್ಪಟ್ಟಿದೆ. ರಥವನ್ನೂ, ಕುದುರೆಗಳನ್ನೂ ನಿರ್ಮಿಸಿಕೊಟ್ಟವರು ಋಭುಗಳು.

ದೇವತೆಗಳೆಲ್ಲರೂ ಸೋಮಪಾನ ಮಾಡುವವರೇ ಆದರೂ ಇಂದ್ರನು ಪೂರ್ತಿಯಾಗಿ ಸೋಮಪಾನ ವ್ಯಸನಿಯಾಗಿರುತ್ತಾನೆ. ಕುಡಿಯಲಿಕ್ಕಾಗಿ ಅವನು ಸೋಮವನ್ನು ಕದ್ದುಕೊಂಡನೆಂತಲೂ ಹೇಳಲ್ಪಟ್ಟಿದೆ. ಇಂದ್ರನ ತರುವಾಯ ಹೇಳತಕ್ಕ ಪಾನಪ್ರಿಯನಾದವನೆಂದರೆ ವಾಯುವೇ ಹೊರತು, ದೇವತೆಗಳಲ್ಲಾಗಲಿ, ಮಾನವರಲ್ಲಾಗಲಿ ಮತ್ತೊಬ್ಬರಿಲ್ಲವೆಂದು ಗೊತ್ತಾಗುತ್ತದೆ. ಚೆನ್ನಾಗಿ ಕುಡಿದಾಗ ಇಂದ್ರನು ಅಸಾಧಾರಣವೆನಿಸುವಂತಹ ಶಕ್ತಿ ಸಾಮರ್ಥ್ಯಗಳನ್ನು ಪ್ರದರ್ಶಿಸುತ್ತಾನೆ. ವೃತ್ರನನ್ನು ಕೊಲ್ಲಲಿಕ್ಕೆ ಇಂದ್ರನು "ಮೂರು ಕೆರೆಗಳ" ಸೋಮವನ್ನು ಕುಡಿದನಂತೆ. ಮತ್ತೊಂದು ಸಂದರ್ಭದಲ್ಲಿ ಅವನು ಒಂದೇ ಗುಟುಕಿನಲ್ಲಿ ಮೂವತ್ತು ಕೆರೆಗಳ ಸೋಮವನ್ನು ಕುಡಿದನೆಂದು



ಹೇಳಲ್ಪಟ್ಟಿದೆ. "ಕರ" ಎಂಬ ಅಳತೆ ಯಾವುದೋ? ಯಥೇಚ್ಛೆಯಾಗಿ ಸೋಮಪಾನ ಮಾಡಿದ ಮೇಲೆ ತನಗೆ ಏನೇನು ಭಾವನೆಗಳು ಬರುತ್ತವೆಂಬುದನ್ನು ಇಂದ್ರನೇ ಸ್ವಯಂ ಒಂದು ಪೂರ್ತಿ ಸೂಕ್ತದಲ್ಲಿ ಹೇಳಿಕೊಂಡಿದ್ದಾನೆ. ಸಾಮಾನ್ಯ ಮನುಷ್ಯರಿಗೆ ಆಗುವ ಹಾಗೆಯೇ ಕುಡಿತದಿಂದಾಗಿ ಇಂದ್ರನಿಗೂ ರೋಗ ಬರುತ್ತದೆ. ಆಗ ಇಂದ್ರನ ಚಿಕಿತ್ಸೆಗಾಗಿ "ಸೌತ್ರಾಮಣಿ" ಎಂಬ ಯಜ್ಞವನ್ನು ಮಾಡಬೇಕಾಯಿತು. ಇಂದ್ರನು ಹಾಲಿನಲ್ಲಿ ಜೇನನ್ನು ಬೆರೆಸಿ ಕೂಡಾ ಕುಡಿಯುತ್ತಾನೆ.

ಇಂದ್ರನು ಎತ್ತಿನ ಮಾಂಸವನ್ನೂ, ಎಮ್ಮೆಯ ಮಾಂಸವನ್ನೂ ತಿನ್ನುವನು. ಅವನು ನೂರು ಎಮ್ಮೆಗಳನ್ನೂ, ಇನ್ನೊಮ್ಮೆ ಮುನ್ನೂರು ಎಮ್ಮೆಗಳನ್ನೂ ತಿಂದಿರುವನೆಂದು ಕೂಡಾ ಋಗ್ವೇದದಲ್ಲಿ ಹೇಳಲ್ಪಟ್ಟಿರುವುದನ್ನು ನೋಡಿದರೆ ಅದರ ಪ್ರಾಚೀನತೆಯನ್ನು ಊಹಿಸಬಹುದು.

ಇಂದ್ರನು ತನ್ನ ಜನ್ಮವನ್ನು ಕುರಿತು ಹೇಳಿಕೊಂಡಂತೆ, ಮೂರು ನಾಲ್ಕು ಮಂಡಲಗಳಲ್ಲಿ ಋಕ್ಕುಗಳಿವೆ. ಅವನು ತನ್ನ ತಾಯಿಯ ಗರ್ಭದಿಂದ ಸಹಜವಲ್ಲದ ರೀತಿಯಲ್ಲಿ ಹುಟ್ಟಬೇಕೆಂದು ಇಚ್ಛಿಸಿದನಂತೆ. ಅವನು ಹುಟ್ಟಿದ ಕೂಡಲೇ ಆಕಾಶವೆಲ್ಲಾ ತೇಜೋಮಂತವಾಯಿತು. ಹುಟ್ಟಿ ಹೊರಬಂದ ಕೂಡಲೇ ಇಂದ್ರನು ಸೂರ್ಯನ ಚಕ್ರವನ್ನು ಹಿಡಿದು ಕದಲಿಸಿ ಯುದ್ಧ ಮಾಡಿದನು. ಅವನ ಪ್ರತಾಪಕ್ಕೆ ಹೆದರಿ ಭೂಮಿಯೂ ಬೆಟ್ಟಗಳೂ ಕಂಪಿಸಿದುವು. ದೇವತೆಗಳೆಲ್ಲರೂ ಅವನನ್ನು ನೋಡಿ ಹೆದರಿದರು. ಅವನನ್ನು ಹಡೆದ ತಾಯಿ ಒಂದು ಹಸುವೆಂತಲೂ ಒಂದು ಕಡೆಯಲ್ಲಿ ಹೇಳಲ್ಪಟ್ಟಿದೆ. ಗೋವಿಗೆ ಹುಟ್ಟಿದ ಕರುವೆನಿಸುವ "ಗಾರ್ಷ್ಟೇಯ"ನಾಗಿದ್ದ ಅವನ ತಾಯಿಯ ಹೆಸರು "ನಿಷ್ಟಿಗ್ರಿ" ಎಂದು ಕೂಡಾ ಹೇಳಲ್ಪಟ್ಟಿದೆ. ಅದಿತಿ ಎಂದರೆ ಇವಳೇ ಎಂದು ಸಾಯಣಾಚಾರ್ಯರು ಹೇಳುತ್ತಾರೆ. ಅಥರ್ವ ವೇದದಲ್ಲಿ ಇಂದ್ರನನ್ನೂ ಅಗ್ನಿಯನ್ನೂ ಹಡೆದವಳ ಹೆಸರು, ಪ್ರಜಾಪತಿಯ ಕುಮಾರಿಯಾದ "ಏಕಾಷ್ಟಕ" ಳೆಂದು ಹೇಳಲ್ಪಟ್ಟಿದೆ. ಇಂದ್ರನಿಗೂ ಅಗ್ನಿಗೂ ಒಬ್ಬನೇ ತಂದೆ. ಇಂದ್ರನು ತನ್ನ ತಂದೆಯ ಕಾಲುಗಳನ್ನು ಹಿಡಿದು ಎತ್ತಿ ಅಪ್ಪಳಿಸಿ ಕೊಂದವನೆಂತಲೂ ಹೇಳಲ್ಪಟ್ಟಿದೆ.

ಇಂದ್ರನ ಹೆಂಡತಿಯ ಹೆಸರು ಇಂದ್ರಾಣಿ ಎಂದು ಅನೇಕ ಕಡೆಗಳಲ್ಲಿ ಹೇಳಲ್ಪಟ್ಟಿದೆ. ಇಂದ್ರನಿಗೆ ಪ್ರಾಸಹಾ, ಸೇನಾ ಎಂಬ ಇಬ್ಬರು ಹೆಂಡಂದಿರು ಇರುವರೆಂದು ಐತರೇಯ ಬ್ರಾಹ್ಮಣದಲ್ಲಿ ಕಾಣುತ್ತದೆ. ವೇದ ಸಂಹಿತೆಗಳಲ್ಲಿಯೂ, ಪುರಾಣಗಳಲ್ಲಿಯೂ ಶಚೀದೇವಿಯೇ ಇಂದ್ರನ ಹೆಂಡತಿ ಎಂದು ಕೆಲವು ಪಂಡಿತರ ಅಭಿಪ್ರಾಯವಾಗಿದೆ. "ವಿಲಿಸ್ತೇಂಗ" ಎಂಬ ದಾನವ ಸ್ತ್ರೀಯನ್ನು ಮೋಹಿಸಿ ಇಂದ್ರನು ಅಸುರರ ನಡುವೆ ಸ್ತ್ರೀಯರ

ಹಿಂದೆ ಸ್ತ್ರೀ ರೂಪದಲ್ಲಿದ್ದನೆಂದೂ, ಪುರುಷರ ನಡುವೆ ಪುರುಷ ರೂಪದಲ್ಲಿದ್ದನೆಂದೂ ಒಂದು ಕಡೆಯಲ್ಲಿ ಹೇಳಲ್ಪಟ್ಟಿದೆ.

ಇಂದ್ರನಿಗೆ ಸನ್ನಿಹಿತರಾಗಿ, ಸಹಚರರಾಗಿ ಇರುವವರು ಮರುತ್ತರು. ಇವರು ಅನೇಕ ಸಾರಿ ಯುದ್ಧಗಳಲ್ಲಿ ಇಂದ್ರನಿಗೆ ಸಹಾಯ ಮಾಡಿದ್ದಾರೆ.

ಕೆಲವು ಸಂದರ್ಭಗಳಲ್ಲಿ ಇಂದ್ರನೇ ಸೂರ್ಯನೆಂದು ಕೂಡಾ ಅಭಿಪ್ರಾಯ ಉಂಟಾಗುತ್ತದೆ: ಒಂದುಸಾರಿ ತಾನೇ ಮನುವೆಂದೂ, ಸೂರ್ಯನೆಂದೂ ಇಂದ್ರನೇ ಹೇಳಿಕೊಳ್ಳುತ್ತಾನೆ.

ಒಟ್ಟಿನ ಮೇಲೆ ಇಂದ್ರನ ಮಹತ್ವನ್ನೂ, ಶಕ್ತಿಯನ್ನೂ ವೇದಗಳಲ್ಲಿ ಅಪರಿಮಿತವಾಗಿ ಹೇಳಲ್ಪಟ್ಟಿವೆ. ಅವನಿಗೆ ಸಮಾನರಾದವರಾರೂ ಹುಟ್ಟಿರಲಿಲ್ಲ, ಹುಟ್ಟುವುದೂ ಇಲ್ಲ. ಯಾವ ದೇವಪುರುಷನೂ ಅವನನ್ನು ಮೀರಿಸಲಾರನು. ಅವನಿಗೆ ಸರಿಸಮನೂ ಆಗಲಾರನು. ಇಂದ್ರನ ಪರಾಕ್ರಮವು ಅನನ್ಯವಾದುದು. ಅವನ ಆಜ್ಞೆಗಳನ್ನು ವರುಣನೂ ಸೂರ್ಯನೂ ಸಹಾ ಪಾಲಿಸಿ ತೀರಬೇಕು. ಪ್ರಪಂಚಕ್ಕೆಲ್ಲಾ ಅವನೇ ಅಧಿಪತಿ. "ಶಕ್ರ" ನೆಂದೂ "ಶಚೀವತ" ಅಂದರೆ ಶಕ್ತಿವಂತನೆಂದೂ ಇಂದ್ರನನ್ನು ಅನೇಕಸಾರಿ ಹೇಳಲಾಗಿದೆ. ಕೆಲವು ಕಡೆಗಳಲ್ಲಿ ಅವನನ್ನು "ಅಸುರ" ನೆಂತಲೂ ಸಂಬೋಧಿಸಲ್ಪಟ್ಟಿದೆ. ವೇದ ಕಾಲದ ಪ್ರಾರಂಭ ದಶೆಯಲ್ಲಿ "ಅಸುರ" ಶಬ್ದವು ಗೌರವ ವಾಚಕವಾಗಿ. ಈ ಸಂಬೋಧನೆ ವರುಣನಿಗೂ ಅಗ್ನಿಗೂ ಇದ್ದಿತು.

ಇಂದ್ರನು ಸೋಮಪಾನ ಮಾಡಿದ ಉತ್ಸಾಹದಲ್ಲಿ, ಮರುದ್ಗಣಗಳನ್ನು ಬೆಂಬಲವಾಗಿಟ್ಟುಕೊಂಡು ವೃತ್ರನನ್ನು ಧ್ವಂಸಮಾಡಲು ಹೋಗುತ್ತಾನೆ. ವೃತ್ರನು ನೀರುಬತ್ತಿ ಹೋಗುವಂತೆ ಮಾಡುವ ಗುಣವುಳ್ಳ ರಾಕ್ಷಸನು. "ವೃತ್ರ" ಎಂದರೆ ದಂಡೆ, ಕಟ್ಟು ಎಂದು ಅರ್ಥವಿದೆ. ವೃತ್ರನು ಹಾವಿನ ರೂಪದವನೆಂದೂ ಹೇಳುತ್ತಾರೆ. ಆದುದರಿಂದ ಇಂದ್ರನು ನದಿಗಳ ಅಣೆಗಟ್ಟುಗಳನ್ನು ಧ್ವಂಸಮಾಡಿ ನದೀ ಜಲಗಳಿಗೆ ಬಿಡುಗಡೆ ಮಾಡಿದನೆಂದು ಊಹಿಸುತ್ತಾರೆ. "ಜಲಗಳ ಸ್ವೇಚ್ಛೆಗೆ ಅಡ್ಡವಾಗಿದ್ದ" ವೃತ್ರನನ್ನು ಇಂದ್ರನು ವಜ್ರಾಯುಧದಿಂದ ಬೆನ್ನಿಗೂ ಮುಖಕ್ಕೂ ಹೊಡೆಯಲು, ನಿರ್ಬಂಧದಲ್ಲಿದ್ದ ನೀರುಗಳು ಸ್ವೇಚ್ಛೆಯಾಗಿ ಪ್ರವಹಿಸಿ ಲೋಕಕ್ಕೆ ಒಳ್ಳೆಯದಾಯಿತೆಂದು ಅರ್ಥವಾಗುತ್ತದೆ. ವೃತ್ರನೊಂದಿಗೆ ಇಂದ್ರನು ಯುದ್ಧಮಾಡಿದನೆಂಬುದು ರಮ್ಯತೆಯ ಕಥೆಯಾಗಿದೆ. ಇಂದ್ರಶಬ್ದವು ಮಳೆಯನ್ನು ಸೂಚಿಸುವಂತೆ, ಮಳೆಯ ನೆರೆಯಲ್ಲಿ ಕೊಚ್ಚಿಹೋದ ಪಶುಗಳು ಇಂದ್ರನ ಆಹಾರವಾಯಿತೆಂದರೆ ಮಳೆತಾನೆ?





# ಇಂದ್ರ

೧

ಇಂದ್ರನು ಮಾಡಿದಂತಹ ಎಷ್ಟೋ ವಿಶಿಷ್ಟ ಕಾರ್ಯಗಳಲ್ಲಿ ವೃತ್ರನನ್ನು ಧ್ವಂಸಮಾಡಿದುದನ್ನು ವಿಶೇಷವಾಗಿ ಹೊಗಳಲಾಗಿದೆ. ಋಗ್ವೇದದಲ್ಲಿ ಎಪ್ಪತ್ತು ಸಾರಿ ಅವನನ್ನು "ವೃತ್ರಹನ"ನೆಂದು ಪ್ರಶಂಸಿಲ್ಪಟ್ಟಿದೆ. ನಿಜಕ್ಕೂ ವೃತ್ರಹನನದಲ್ಲಿ ಇಂದ್ರನೊಂದಿಗೆ ಅಗ್ನಿಗೂ, ಮರುತ್ತರೇ ಮೊದಲಾದವರಿಗೂ ಸ್ವಲ್ಪ ಪಾಲು ಇಲ್ಲದಿರಲಿಲ್ಲ. ಆದರೂ ಅದರ ಪ್ರಾಧ್ಯಾನತೆ ಇಂದ್ರನಿಗೇ ಸಲ್ಲುತ್ತದೆ.

ಇಂದ್ರನು ವೃತ್ರನನ್ನು ಮಾತ್ರವಲ್ಲದೆ ಊರಣ, ವಿಶ್ವರೂಪ, ಅರ್ಬುದ ಮೊದಲಾದ ಅನೇಕ ರಾಕ್ಷಸರನ್ನು ಕೂಡಾ ಕೊಂದಿದ್ದಾನೆ. ಹೀಗೆ ರಾಕ್ಷಸರನ್ನು ಕೊಂದಾಗಲೆಲ್ಲಾ ಇಂದ್ರನು ಸೋಮವನ್ನು ಹೊಟ್ಟೆ ತುಂಬಾ ಕುಡಿದು ತೃಪ್ತನಾಗುವನು.

ಇಂದ್ರನು ಪರ್ವತಗಳಿಗೂ ಮೈದಾನ ಪ್ರದೇಶಗಳಿಗೂ ಇರುವ ಕಂಪನವನ್ನು ನಿಲ್ಲಿಸಿದನೆಂದು ಹೇಳಲ್ಪಟ್ಟಿದೆ, ಆರ್ಯರು ತಮ್ಮ ಶತ್ರುಗಳೊಂದಿಗೆ ಹೋರಾಡ ಬೇಕಾಗಿ ಬಂದಾಗಲೆಲ್ಲಾ ಇಂದ್ರನನ್ನು ಸ್ಮರಿಸಲು, ಸಂಚಾರ ಶೀಲರಾದ ಆರ್ಯರಿಗೆ ಭೂಮಿ ಸುಗಮವಾದುದೊಂದು ಕಾರಣವೆನ್ನಬಹುದು. ಪುರಾಣ ಸಾಹಿತ್ಯದಲ್ಲಿ ಇಂದ್ರನು ಪರ್ವತಗಳ ರೆಕ್ಕೆಗಳನ್ನು ಖಂಡಿಸಿದನೆಂದು ಹೇಳಲ್ಪಟ್ಟಿವೆ. ಇಂದ್ರನು ಭೂಮ್ಯಾಕಾಶಗಳನ್ನು ಬೇರೆ ಬೇರೆ ಮಾಡಿ ನಿಲ್ಲಿಸಿದ್ದನು. ಇವೆರಡನ್ನು ಯಾವನೋ ಒಬ್ಬ ರಾಕ್ಷಸನು ಒಂದಾಗಿ ಮಾಡಿದಾಗ ಇಂದ್ರನು ಅವನನ್ನು ಕೊಂದು ಅವೆರಡನ್ನೂ ಬೇರೆಬೇರೆ ಮಾಡಿದನೆಂದೂ ಹೇಳಲಾಗಿದೆ.

'ಆರ್ಯರು ಇಂದ್ರನನ್ನು ಮಾತು ಮಾತಿಗೂ ಸ್ಮರಿಸುವುದು ಮಾತ್ರವಲ್ಲದೆ ಆವಾಹನೆ ಕೂಡಾ ಮಾಡುತ್ತಿದ್ದರು. ಇಂದ್ರನು "ಕರ್ರಗಿನ" ಜನರನ್ನು ಜಯಿಸಿದನೆಂದೂ ವಿವರಿಸಲಾಗಿದೆ. ಅಂದರೆ ಇಂದ್ರನು ಐವತ್ತು ಸಾವಿರಮಂದಿ ಕಪ್ಪು ಜನರನ್ನು ಓಡಿಸಿ, ಅವರ ಪಟ್ಟಣಗಳನ್ನೆಲ್ಲ ಧ್ವಂಸ ಮಾಡಿದನು. ದಸ್ಯುಗಳನ್ನು ಆರ್ಯರಿಗೆ ದಾಸರಾಗುವಂತೆ ಮಾಡಿ ಆರ್ಯರಿಗೆ ಭೂಮಿಯನ್ನು ಕೊಟ್ಟನು. ಸಪ್ತ ಸಿಂಧು ದೇಶದಲ್ಲಿ ದಸ್ಯುಗಳ ಆಯುಧಗಳನ್ನು ಆರ್ಯರ ಮೇಲೆ ಬೀಳದಂತೆ ಹಿಂದಿರುಗಿಸಿ ಆರ್ಯರನ್ನು



ಕಾಪಾಡಿದನು. ತನ್ನನ್ನು ನಂಬಿದವರ ಮೇಲೆ ಇಂದ್ರನಿಗಿರುವ ದಯವು ಅಪಾರ. ಅಂಥವರಿಗೆ ಯಾವಾಗಲೂ ಸಹಾಯಕಾರಿಯಾಗಿರುವನು. ತನ್ನನ್ನು ಆರಾಧಿಸುವವರಿಗೆ ಅವನು ಮಿತ್ರ, ಸೋದರ, ತಂದೆ ಎಲ್ಲವೂ!

ಇಂದ್ರನಿಗೆ ಕುಶಿಕ ವಂಶದ ಮೇಲೆ ತುಂಬಾ ಅಭಿಮಾನ. ಒಂದುಸಾರಿ ಇಂದ್ರನನ್ನೇ ಕೌಶಿಕ ಎಂದು ಸಂಬೋಧಿಸಲ್ಪಟ್ಟಿದೆ. ಸಮಸ್ತ ಸಂಪದಗಳಿಗೂ ಇಂದ್ರನೇ ಮೂಲ. ಅವನ ಯುದ್ಧಗಳನ್ನು "ಗವಿಷಿ" ಅಂದರೆ ಗೋವುಗಳ ಆಶೆ ಎನ್ನುತ್ತಿದ್ದರು. ಇಂದ್ರನು ಯಾವಾಗಲೂ ಹೆಚ್ಚಾಗಿ ಗೋವುಗಳನ್ನೇ ಭಕ್ತರಿಗೆ ನೀಡುವನು. ಒಂದೊಂದುಸಾರಿ ಭಕ್ತರಿಗೆ ಹೆಂಡದಿ ರನ್ನೂ ಮಕ್ಕಳನ್ನೂ ಸಹ ಕೊಡುತ್ತಾನೆ. ಋಗ್ವೇದದಲ್ಲಿ "ಮಘವ" ಅಂದರೆ ಧಾರಾಳವಾಗಿ ಕೊಡುವವನು ಇಂದ್ರನೇ ಎಂದಿದೆ. ಅವನೇ "ವಸುಪತಿ" ಅಂದರೆ ಸಂಪತ್ತುಗಳ ಒಡೆಯ.

ಇಂದ್ರನ ವೀರಕೃತ್ಯಗಳು ಅನೇಕ ಹೇಳಲ್ಪಟ್ಟಿವೆ. ಅವನು ಉಷೆಯ ಗಾಡಿಯನ್ನು ಒಡೆದು ಹಾಕಿದನು. ವಾಹನಗಳನ್ನು ನಾಶಮಾಡಿದನು. ಆದರಿಂದ ಉಷಾ ಹೆದರಿ ಓಡಿ ಹೋದಳು.

ಉಷೆಗೆ ಮಾತ್ರವಲ್ಲದೆ ಸೂರ್ಯನ ರಥಕ್ಕೂ, ಏತಶವೆಂಬ ಕುದುರೆಯಿಂದ ಎಳೆಯಲ್ಪಡುವ ರಥಕ್ಕೂ ಸ್ಪರ್ಧೆಯುಂಟಾದಾಗ, ಸೂರ್ಯನ ರಥವೇ ಮುಂದಕ್ಕೆ ಹೋಗುವುದನ್ನು ನೋಡಿ, ಇಂದ್ರನು ಅದರಲ್ಲಿ ತಲೆ ಹಾಕಿ, ಸೂರ್ಯನ ರಥದ ಒಂದು ಚಕ್ರವನ್ನು ಕಿತ್ತು ಒಡೆದು ಹಾಕಿದನು. ಆದುದರಿಂದಲೇ ಸೂರ್ಯನ ರಥಕ್ಕೆ ಒಂದೇ ಚಕ್ರವೆಂದು ಹೇಳುತ್ತಾರೆ.

ಒಂದು ಸಂದರ್ಭದಲ್ಲಿ ಪಣಿ ಎಂಬ ಜಾತಿಗೆ ಸೇರಿದ ಲೋಭಿಗಳು ಯಜ್ಞದಲ್ಲಿ ಬಲಿಕೊಡಲು ಗೋವು ಗಳನ್ನು ಕೊಡಲಿಲ್ಲ. ಗೋವುಗಳನ್ನೆಲ್ಲ ಎಲ್ಲಿಯೋ ಗುಹೆಗಳಲ್ಲಿ ಅಡಗಿಸಿಟ್ಟುಬಿಟ್ಟರು. ಇಂದ್ರನು ಇದನ್ನು ತಿಳಿದು ಸರಮಾ ಎಂಬ ದೂತೆಯನ್ನು ಕಳುಹಿಸಿದನು. ಅವಳು ಪಣಿಗಳ ಹತ್ತಿರ ಹೋಗಿ ಇಂದ್ರನಿಗಾಗಿ ಗೋವುಗಳನ್ನು ಕೇಳಿದಾಗ ಅವರು ಅವಳಿಗೆ ಗೇಲಿ ಮಾಡಿ ನೆಗಾಡಿದರು. ಇದನ್ನು ಕೇಳಿ ಇಂದ್ರನು ಸ್ವತಃ ಬಂದು ಪಣಿಗಳನ್ನು ಜಯಿಸಿ ಗೋವುಗಳನ್ನು ತೆಗೆದುಕೊಂಡನು.

ಇಂದ್ರನು ದಾಸರನ್ನೂ ದಸ್ಯುಗಳನ್ನೂ ಜಯಿಸಿ ದಂತೆ ಅನೇಕಸಾರಿ ಹೇಳಲ್ಪಟ್ಟಿದೆ. ಇವರೆಲ್ಲಾ ಚಪ್ಪಟೆ ಮೂಗುಗಳಿರುವ ಕಪ್ಪಗಿನ ಮನುಷ್ಯರೇ. ಹೀಗೆ ಇಂದ್ರನು ಪ್ರತ್ಯೇಕ ವ್ಯಕ್ತಿಗಳಿಗೆ ಕೂಡಾ ಒಳ್ಳೆಯದು ಮಾಡಿದ್ದಾನೆ. ಹಾಗೆ ಇಂದ್ರನ ಅಭಿಮಾನಕ್ಕೆ ಪಾತ್ರ ರಾದವರಲ್ಲಿ ದಿವೋದಾಸನೂ ಒಬ್ಬನು. ಈ ದಿವೋ ದಾಸನ ಮಗನೇ ಸುಪ್ರಸಿದ್ಧನಾದ ರಾಜ ಸುದಾಸ. ಈ ದಿವೋದಾಸನ ಶತ್ರು ಶಂಬರನೆಂಬವನು ದಾಸ ಜಾತಿಯವನು. ಇಂದ್ರನು ದಿವೋದಾಸನಿಗಾಗಿ ಆ ಶಂಬರನನ್ನು ಕೊಂದನು.

ನಮುಚಿ ಎಂಬವನು ಒಬ್ಬ ರಾಕ್ಷಸ. ವೇದಸಾಹಿತ್ಯದಲ್ಲಿ ಇವನ ಪ್ರಸ್ತಾವನೆ ಅನೇಕ ಕಡೆಗಳಲ್ಲಿ ಬಂದಿವೆ. ಇಂದ್ರನು ಇವನ ತಲೆಯನ್ನು ತಿರುಗಿಸಿ ಕೊಂದನೆಂದೂ, ಇನ್ನೊಂದು ಕಡೆಯಲ್ಲಿ ನೀರಿನ ನೊರೆಗಳಿಂದ ಕೊಂದನೆಂದೂ ಹೇಳಲ್ಪಟ್ಟಿದೆ. ಇಂದ್ರನು ರಾಕ್ಷಸರನ್ನು ಸಮುದ್ರದ ನೊರೆಗಳಿಂದ ಕೊಲ್ಲುವ ಪದ್ಧತಿ ವೃತ್ರನನ್ನು ಕೊಲ್ಲುವಾಗಲೂ ನಡೆದಿದೆ.

ಒಂದುಸಾರಿ ಇಂದ್ರನು ನಮುಚಿಯ ಸಾನ್ನಿಧ್ಯದಲ್ಲಿ ವಿಪರೀತವಾಗಿ ಕುಡಿದು ರೋಗ ತಂದುಕೊಂಡು ನರಳುತ್ತಿದ್ದಾಗ, ಅಶ್ವಿನೀ ದೇವತೆಗಳೂ ಸರಸ್ವತಿಯೂ ಚಿಕಿತ್ಸೆಮಾಡಿ ವಾಸಿಮಾಡಿದರೆಂದು ಋಗ್ವೇದದ ಹತ್ತನೇ ಮಂಡಲದಲ್ಲಿದೆ.

ಯದು ಮತ್ತು ತುರ್ವಸುಗಳು ನದಿಯನ್ನು ದಾಟಲಾಗದೆ ಹೋದಾಗ ಇಂದ್ರನು ಅವರನ್ನು ನದಿ ದಾಟಿಸಿದನು. ಇದು ಸ್ವಲ್ಪ ಹೆಚ್ಚುಕಡಿಮೆ ವಾಸ್ತವ ಚರಿತ್ರೆಗೆ ಸಂಬಂಧಿಸಿದ ಅಂಶವಾಗಿ ಕಾಣುತ್ತದೆ. ಯಾದವರು ಶಾಖೋಪಶಾಖೆಗಳಾಗಿ ಹರಡಿ, ಭರತ ಖಂಡದ ಅನೇಕ ಪ್ರಾಂತಗಳಿಗೆ ವ್ಯಾಪಿಸಿ ಸ್ಥಿರಪಟ್ಟಿರುವರೆಂದು ಪುರಾತತ್ವ ಸಂಶೋಧನೆಗಳಿಂದ ತಿಳಿದುಬರುತ್ತದೆ. ಆರ್ಯರ ಸಂಚಾರ ಜೀವನದಲ್ಲಿ ಇಂದ್ರನ ಸಂಬಂಧವಿರುವುದನ್ನು ನೋಡುವಾಗ ಈ ಸಂಘಟನೆ ದೃಢವೆನಿಸುತ್ತದೆ.

ಇಂದ್ರನೂ ಸುಶ್ರವಸುವೂ ಕೂಡಿ ಇಪ್ಪತ್ತುಮಂದಿ ಅರಣ್ಯ ಜಾತಿಯವರ ನಾಯಕರನ್ನೂ, ಅರುವತ್ತು ಸಾವಿರದ ತೊಂಬತ್ತೊಂಬತ್ತುಮಂದಿ ಅರಣ್ಯದ ಯೋಧರನ್ನೂ ನಾಶಮಾಡಿದಂತೆ ಕಥೆಯಿದೆ. ಹಾಗೆಯೇ ಸುದಾಸನ ಯುದ್ಧಗಳೆಲ್ಲವೂ ಚಾರಿತ್ರಿಕವಾದುದಾಗಿಯೇ ಕಾಣುತ್ತವೆ. ದಶರಾಜ್ಞ ಯುದ್ಧವೆಂಬುದು ಸುದಾಸನು ಹತ್ತುಮಂದಿ ರಾಜರೊಂದಿಗೆ ಯುದ್ಧ ಮಾಡಿದುದು. ಇದರಲ್ಲಿ ಇಂದ್ರನು ಸುದಾಸನಿಗೇ ಸಹಾಯಮಾಡಿದನು. ಹಾಗೆ ಸಹಾಯ ಮಾಡುವಂತೆ ವಸಿಷ್ಠ, ತೃತ್ಸು ಮೊದಲಾದ ಋಷಿಗಳು ಇಂದ್ರನನ್ನು ಕೇಳಿಕೊಂಡರು. ಕಡೆಗೆ ಇಂದ್ರನು ಸುದಾಸನ ಶತ್ರುಗಳನ್ನೆಲ್ಲ ಪರುಷ್ಣೀ ನದಿಯಲ್ಲಿ



ಬಿಸುಟುಬಿಟ್ಟನು. ವೇದಕಾಲದ ಇಂದ್ರನು ನೈತಿಕ ವರ್ತನೆಯಲ್ಲಿಯೂ, ಔನ್ನತ್ಯದಲ್ಲಿಯೂ ವರುಣ ನೊಂದಿಗೆ ಸರಿಬಾರನು. ಆದರೂ ವರುಣನಲ್ಲಿರುವು ವೆಂದು ವರ್ಣಿಸಲ್ಪಟ್ಟ ಗುಣಗಳೆಲ್ಲ ಅನೇಕವಾಗಿ ಇಂದ್ರನಲ್ಲಿಯೂ ಇರುವುವೆಂದು ಹೇಳಲ್ಪಟ್ಟದೆ.

ಗೌತಮನ ಪತ್ನಿಯಾದ ಅಹಲ್ಯೆಗೂ, ಇಂದ್ರನಿಗೂ ಇರುವ ಸಂಬಂಧದ ಕಥೆ ವೇದಕಾಲದ್ದೇ ಹೊರತು ಪುರಾಣಕಾಲದ ಕಲ್ಪನೆಯೆನ್ನುವಂತಿಲ್ಲ.

ವರುಣನು ಇಂದ್ರನಿಗಿಂತಲೂ ಪೂರ್ವದವನೆಂದು ಕೆಲವು ಪಂಡಿತರು ಅಭಿಪ್ರಾಯಪಡುತ್ತಾರೆ. ಋಗ್ವೇದ ಕಾಲವು ಮುಂದುವರಿಯುತ್ತಾ ಬಂದಂತೆ, ವರಣನ ಪ್ರಸ್ತಾವನೆಯ ಭಾಗವು ತಗ್ಗುತ್ತಾ ಹೋಗಿ, ಇಂದ್ರನ ಪ್ರಶಂಸೆಯೇ ಮುಖ್ಯವಾಗಿ ಉಳಿಯಿತು.

ಪಾರಸೀಕರ ಮತ ಗ್ರಂಥವಾದ "ಅವೆಸ್ತಾ"ದಲ್ಲಿ ಇಂದ್ರನ ಪ್ರಸ್ತಾವನೆ ಇದೆಯೇ ಹೊರತು ಪ್ರಶಂಸೆ ಇಲ್ಲ. ಅವರ ಲೆಕ್ಕದಲ್ಲಿ ಇಂದ್ರನೊಬ್ಬ ರಾಕ್ಷಸ. ಹಾಗೆಯೇ "ದೇವ" ಶಬ್ದಕ್ಕೆ ಅವೆಸ್ತಾದಲ್ಲಿ ಗೌರವ ವೇನಿಲ್ಲ. ಆ ಗ್ರಂಥವು "ಅಸುರ" ಶಬ್ದವನ್ನು ಗೌರವಿಸುತ್ತದೆ. ಆ ವೇದಗಳಲ್ಲಿರುವ ಅನೇಕ ಮಾತು ಗಳು ಅವೆಸ್ತಾದಲ್ಲಿಯೂ ಇವೆ. ಅದರಿಂದ ವೇದ ಗಳಿಗೂ, ಅವೆಸ್ತಾಕ್ಕೂ ಒಂದೇ ಬಗೆಯ ಸಂಸ್ಕೃತಿ ಇದ್ದಿರಬಹುದು. ಒಂದು ಕಾಲದಲ್ಲಿ ವೇದಗಳಲ್ಲಿ "ಅಸುರ" ಶಬ್ದವು ಗೌರವವಾಚಕವಾಗಿದ್ದುದನ್ನು ಗಮನಿಸಿದರೆ ಇದು ನಿಜವೆನಿಸುತ್ತದೆ. ಆದರೆ ಒಂದು ದಶೆಯಲ್ಲಿ ಅವೆರಡರ ನಡುವೆ ವೈಷಮ್ಯ ಉಂಟಾಯಿತು. ಹತ್ತುಮಂದಿ ರಾಜರ "ದಶರಾಜ್ಞ" ಯುದ್ಧದಿಂದಾಗಿಯೇ ಈ ವೈಷಮ್ಯ ಬಂತೆಂದು ಕೆಲವರು ಹೇಳುತ್ತಾರೆ.

ಪುರಾಣ ಕಾಲದ ಇಂದ್ರನನ್ನು ವೇದಕಾಲದ ಇಂದ್ರ ನೊಂದಿಗೆ ಹೋಲಿಸುವಾಗ ದೊಡ್ಡ ಯೋಧನಾಗಿ ಕಾಣುವುದಿಲ್ಲ. ಯಜ್ಞಗಳ ಕಾಲ ಅಂತರಿಸಿ, ತಪಸ್ಸಿಗೆ ಪ್ರಾಮುಖ್ಯತೆ ಬಂದ ಮೇಲೆ, ಪ್ರತಿ ರಾಕ್ಷಸನೂ ತಪಸ್ಸು ಮಾಡಿ, ಬ್ರಹ್ಮನಿಂದಲೋ ಶಿವನಿಂದಲೋ ವರಗಳನ್ನು ಪಡೆದು ಇಂದ್ರನನ್ನು ಅವಲೀಲೆಯಾಗಿ ಜಯಿಸಿಬಿಟ್ಟರು.

ಆಗ ಇಂದ್ರನು ವಿಷ್ಣುಮೂರ್ತಿಯನ್ನು ಮಾತ್ರ ವಲ್ಲದೆ, ದಶರಥನಂತಹ ಮನುಷ್ಯರ ಸಹಾಯವನ್ನು ಕೂಡಾ ಪಡೆಯಬೇಕಾಗಿ ಬಂದಿದೆ! ಎಷ್ಟೇ ದೊಡ್ಡವ ನಾದರೂ, ಎಷ್ಟೇ ಬಲಶಾಲಿಯಾದರೂ ಸಮಯ ಬಂದಾಗ ಇನ್ನೊಬ್ಬರ ಸಹಾಯ ಬೇಕಾಗುವುದೆಂಬ ಎಚ್ಚರವನ್ನು ಇಂದ್ರನು ಕೊಡುತ್ತಾನೆ. ಹೀಗೆ ಅಮರ ರಾಜನಾದ ಇಂದ್ರನ ಕಥೆ ಬಗೆಬಗೆಯಾಗಿ, ಗಹನ ವಾಗಿ, ಗೂಢಾರ್ಥ ಬಿಂಬಿತವಾಗಿ, ಮನೋರಂಜಕ ವಾಗಿ ಅಮರವೆನಿಸಿದೆ.





# ಪರಶುರಾಮ

ಪುರಾಣ ಕಾಲದಲ್ಲಿ ಋಚೀಕನ ಮಗನಾಗಿ ಹುಟ್ಟಿದವನು ಜಮದಗ್ನಿ. ವಿಶ್ವಾಮಿತ್ರನಿಗೆ ಜಮದಗ್ನಿ ಸೋದರಳಿಯನಾಗಬೇಕು. ಈ ಜಮದಗ್ನಿ ಪ್ರಸೇನಜಿತ್ತುವಿನ ಮಗಳಾದ ರೇಣುಕೆಯನ್ನು ಮದುವೆ ಮಾಡಿಕೊಂಡನು. ಇವರಿಗೆ ರಮಣ್ವಾಂತ, ಸುಷೇಣ, ವಸು, ವಿಶ್ವಾವಸು, ರಾಮ ಎಂಬ ಐವರು ಗಂಡು ಮಕ್ಕಳು ಹುಟ್ಟಿದರು.

ಹೀಗಿರುವಾಗ ಒಂದು ದಿನ ರೇಣುಕೆ ಎಂದಿನಂತೆ ನೀರು ತರಲು ನದಿಗೆ ಹೋದಾಗ, ಒಂದು ವಿಚಿತ್ರ ನಡೆಯಿತು. ಚಿತ್ರರಥನೆಂಬ ರಾಜನು ಜಲಕ್ರೀಡೆಯಾಡುವುದನ್ನು ನೋಡುತ್ತಾ ಅವಳು ಬಹಳ ಹೊತ್ತು ಮೈ ಮರೆತು ನಿಂತುಬಿಟ್ಟಳು. ತರುವಾಯ ಹೊತ್ತಾಗಿ ಹೋದುದಕ್ಕೆ ಗಂಡನು ಎಷ್ಟು ಕೋಪದಿಂದ ಉರಿದು ಬೀಳುವನೋ ಎಂದು ಹೆದರುತ್ತ ನೀರು ತೆಗೆದುಕೊಂಡು ಆಶ್ರಮಕ್ಕೆ ಬಂದಳು.

ಮೊದಲೇ ಕೋಪಿಷ್ಠನಾದ ಜಮದಗ್ನಿ ಅವಳ ಮನಸ್ಸಿನ ಚಾಂಚಲ್ಯವನ್ನು ತಿಳಿದು, ತನ್ನಂತಹ ಮುನಿಗೆ ತಕ್ಕ ಪತ್ನಿಯಾಗಿರಲು ಅವಳು ಯೋಗ್ಯಳಲ್ಲವೆಂದು ಸಿಟ್ಟಿನಿಂದ ಉರಿದು, ಅವಳನ್ನು ದೂರ ಒಯ್ದು ಕೊಂದು ಬರುವಂತೆ ತನ್ನ ಕುಮಾರರಿಗೆ ಆಜ್ಞೆ ಮಾಡಿದನು. ನಾಲ್ಕು ಮಂದಿ ಕುಮಾರರೂ ಮಾತೃವಧೆ ತಮ್ಮಿಂದಾಗದೆಂದು ನಿರಾಕರಿಸಿಬಿಟ್ಟರು. ಆದರೆ ಪಿತೃವಾಕ್ಯ ಪಾಲನೆಯೇ ಧರ್ಮವೆಂದು ದೃಢವಾಗಿ ನಂಬಿದ ರಾಮನು ತಂದೆಯ ಆಜ್ಞೆಯಂತೆ ತಾಯಿಯನ್ನು ದೂರ ಕರೆದುಕೊಂಡು ಹೋಗಿ ಕೊಂದು, ರಕ್ತದ ಕತ್ತಿಯೊಂದಿಗೆ ತಂದೆಯ ಮುಂದೆ ಬಂದು ನಿಂತು, ತಾಯಿಯನ್ನು ಕೊಂದುಬಿಟ್ಟೆನೆಂದು ಹೇಳಿದನು.

ಜಮದಗ್ನಿ ಅವನ ಪಿತೃವಾಕ್ಯ ಪರಿಪಾಲನೆಗಾಗಿ ಸಂತೋಷಪಟ್ಟು, “ನಿನಗೇನು ವರ ಬೇಕೋ ಕೇಳು ಕಂದಾ” ಎಂದನು.

“ನನ್ನ ತಾಯಿಯನ್ನು ಬದುಕಿಸಿ ಕೊಡಿ ಅಪ್ಪಾ” ಎಂದನು ರಾಮ. ಜಮದಗ್ನಿ ಹಾಗೆಯೇ ರೇಣುಕೆಯನ್ನು ಮತ್ತೆ ಬದುಕಿಸಿದನು. ರಾಮನ ಪಿತೃನಿಷ್ಠೆಗೆ ಸಂತುಷ್ಟನಾದ ಜಮದಗ್ನಿ ಅವನ ಕೈಗೊಂದು ಪರಶುವನ್ನು ಕೊಟ್ಟು, ಅಪಜಯವಾಗದಂತೆ ವಿಶೇಷ ವರವನ್ನೂ ಕೊಟ್ಟನು. ಅಂದಿನಿಂದ ತಂದೆ ಕೊಟ್ಟ ಕೊಡಲಿಯನ್ನೇ ಆಯುಧವನ್ನಾಗಿ ಇಟ್ಟುಕೊಂಡ

ರಾಮನಿಗೆ ಪರಶುರಾಮನೆಂಬ ಹೆಸರು ಬಂದಿತು. ಒಂದು ಸಾರಿ ಪರಶುರಾಮನು ತನ್ನ ತಾತನನ್ನು ನೋಡಬೇಕೆಂದು ಋಚೀಕನ ಆಶ್ರಮಕ್ಕೆ ಹೋದನು. ಅಲ್ಲಿ ಕೆಲವು ದಿನಗಳಿದ್ದ ಮೇಲೆ, ಔರ್ವನ ಆಶ್ರಮಕ್ಕೆ ಹೋದನು. ಔರ್ವನು ಭೃಗು ವಂಶಕ್ಕೆ ಸೇರಿದ ಚ್ಯವನನ ಮಗ. ಅಲ್ಲಿ ಪರಶುರಾಮನು ಸ್ವಲ್ಪ ಕಾಲವಿದ್ದು, ಔರ್ವನಿಂದ ಅಪ್ಪಣೆ ಪಡೆದು, ಜಮದಗ್ನಿಯ ತಾತನೂ, ತನ್ನ ಮುತ್ತಾನೂ ಆದ ಭೃಗುವಿನ ಆಶ್ರಮಕ್ಕೆ ಹೋದನು. ಇವನು ದೂರದಿಂದ ಬರುವಾಗ ಇವನ ಶರೀರದಿಂದ ಹೊರಡುವ ತೇಜಸ್ಸಿನ ಕಾಂತಿಯನ್ನು ನೋಡಲಾಗದೆ ಭೃಗುವಿನ ಶಿಷ್ಯರು ಕಣ್ಣುಗಳನ್ನು ಮುಚ್ಚಿಕೊಂಡರು.

ಭೃಗು ತನ್ನ ಮರಿಮೊಮ್ಮಗನನ್ನು ನೋಡಿ ಅತ್ಯಂತ ಪ್ರೇಮದಿಂದ ಆದರಿಸಿ ಬೆನ್ನು ತಡವುತ್ತ, "ಕಂದಾ, ನಿನಗೂ, ನಮಗೂ, ಲೋಕಕ್ಕೂ ಒಳ್ಳೆಯದಾಗುವಂತಹ ಮಾತುಗಳನ್ನು ಹೇಳುತ್ತೇನೆ, ಕೇಳು. ನಿನ್ನಿಂದ ಮಹತ್ಕಾರ್ಯವಾಗಲಿದೆ. ನೀನು ಹಿಮಾಲಯಕ್ಕೆ ಹೋಗಿ ಶಿವನನ್ನು ಧ್ಯಾನಿಸಿ ತಪಸ್ಸು ಮಾಡು. ನಿನ್ನ ಮನಸ್ಸಿನಲ್ಲಿರುವ ಕೋರಿಕೆಗಳೆಲ್ಲಾ ಫಲಿಸುತ್ತವೆ." ಎಂದನು.

ಪರಶುರಾಮನು ಭೃಗು ಹೇಳಿದಂತೆಯೇ ಹಿಮಾಲಯಕ್ಕೆ ಹೋಗಿ, ತಪಸ್ಸನ್ನು ಪ್ರಾರಂಭಿಸಿದನು. ತಪಸ್ಸಿನಲ್ಲಿರುವ ಅವನ ಏಕಾಗ್ರತೆಯ ದೃಢ ದೀಕ್ಷೆಯನ್ನು ನೋಡಿ ಹಿಮಾಲಯದ ಮೇಲೆ ತಪಸ್ಸು ಮಾಡುತ್ತಿದ್ದ ಇತರ ಮುನಿಗಳಿಗೆ ಆಶ್ಚರ್ಯವಾಯಿತು.

ಒಂದು ದಿನ ಶಿವನು ಅವನನ್ನು ಪರೀಕ್ಷೆ ಮಾಡಬೇಕೆಂದುಕೊಂಡು ಬೇಡನ ವೇಷದಲ್ಲಿ ಅವನ ಮುಂದೆ ಪ್ರತ್ಯಕ್ಷನಾಗಿ, "ಯಾರಯ್ಯ ನೀನು? ಇಲ್ಲಿಗೆ ಏತಕ್ಕೆ ಬಂದೆ?" ಎಂದು ಕೇಳಿದನು.

ಪರಶುರಾಮನು ಕಣ್ಣು ಬಿಡಿಸಿ ಬೇಡನನ್ನು ನೋಡಿ ವಿನಯದಿಂದ ಅವನ ಪ್ರಶ್ನೆಗೆ ಉತ್ತರ ಕೊಟ್ಟನು.

ಅದನ್ನು ಕೇಳಿಕೊಂಡು ಬೇಡನು ಹೊರಟು ಹೋಗುವುದಕ್ಕೆ ಬದಲಾಗಿ ಪರಶುರಾಮನನ್ನು ನೋಡುತ್ತ ಸುಮ್ಮನೆ ನಿಂತನು. "ಇನ್ನೂ ಏಕೆ



ನಿಂತಿರುವೆ? ಹೀಗೆ ನಿಂತು ನನ್ನ ತಪಸ್ಸಿಗೆ ವಿಘ್ನ ತರಬೇಡ. ಬೇಕಾದರೆ ನೀನು ನನ್ನ ಹಾಗೆಯೇ ತಪಸ್ಸಿಗೆ ಕುಳಿತುಕೋ. ಶಿವನನ್ನು ಧ್ಯಾನಿಸಿ ತಪಸ್ಸು ಮಾಡು" ಎಂದನು ಪರಶುರಾಮ.

"ನನ್ನನ್ನು ತಪಸ್ಸುಮಾಡುವಂತೆ ಹೇಳಲು ನೀನು ಯಾರು? ನಾನು ನಿಲ್ಲುವುದಕ್ಕೂ ನಡೆಯುವುದಕ್ಕೂ ನಿನ್ನ ಅಪ್ಪಣೆ ಕೇಳಬೇಕೇನು?" ಎಂದನು ಬೇಡ. ಇಬ್ಬರಿಗೂ ಸ್ವಲ್ಪ ವಾಗ್ವಿವಾದ ನಡೆಯಿತು. ಈ ಬೇಡನು ತನ್ನ ಅಹಂಕಾರವನ್ನು ಪರೀಕ್ಷಿಸಲು ಬಂದ ಯಾವ ಮಹಾಪುರುಷನೋ ಎಂದುಕೊಂಡು ಪರಶುರಾಮನು ಅವನ ಮುಂದೆ ಸಾಷ್ಟಾಂಗವಾಗಿ ಬಿದ್ದನು.

ಶಿವನು ಬಹಳ ಸಂತೋಷಪಟ್ಟು ಪರಶುರಾಮನನ್ನು ಎಬ್ಬಿಸಿ, ತಾನು ಯಾರೆಂಬುದನ್ನು ತೋರಿಸಿ, "ಅಪ್ಪಾ, ನೀನು ಇನ್ನೂ ಚಿಕ್ಕವ. ರೌದ್ರಾಸ್ತ್ರವನ್ನು ಧರಿಸುವ ಶಕ್ತಿ ನಿನಗಿನ್ನೂ ಬಂದಿಲ್ಲ. ಆದುದರಿಂದ ಸ್ವಲ್ಪಕಾಲ ತೀರ್ಥಯಾತ್ರೆಮಾಡಿ ಬಾ" ಎಂದು ಹೇಳಿ ಅಂತರ್ಧಾನನಾದನು.

ಅದರಂತೆ ಪರಶುರಾಮನು ತಾತ್ಕಾಲಿಕವಾಗಿ ತಪಸ್ಸನ್ನು ಕಟ್ಟಿಟ್ಟು, ತೀರ್ಥಯಾತ್ರೆಮಾಡಿ ಬಂದನು. ಆ ಮೇಲೆ ಮತ್ತೆ ಕುಳಿತು ತಪಸ್ಸಿಗೆ ಪ್ರಾರಂಭಿಸಿದನು.

ಹೀಗಿರುವಾಗ ಇಂದ್ರನು ದೇವತೆಗಳನ್ನು ತನ್ನೊಂದಿಗೆ ಕರೆದುಕೊಂಡು ಶಿವನ ಬಳಿಗೆ ಬಂದು "ಮಹಾದೇವಾ! ದಾನವರು ನಮ್ಮ ನಗರದೊಳಗೆ ನುಗ್ಗಿ ನಾಶಮಾಡುತ್ತಿದ್ದಾರೆ. ಅವರನ್ನು ಓಡಿಸಲು ನಮ್ಮಿಂದಾಗಲಿಲ್ಲ. ನೀನೇ ನಮ್ಮನ್ನು ಕಾಪಾಡಬೇಕು" ಎಂದು ಬೇಡಿಕೊಂಡನು.

ಶಿವನು ಮಹೋದರನೆಂಬ ಗಣನಾಯಕನನ್ನು ಕರೆದು, ಪರಶುರಾಮನನ್ನು ಕರೆದುಕೊಂಡು ಬರಲು ಹೇಳಿದನು. ಶಿವನು ಕರೆಯುವನೆಂದು ಕೇಳಿ ಪರಶುರಾಮನು ಕೂಡಲೇ ತಪಸ್ಸಿನಿಂದೆದ್ದು ಶೀಘ್ರವಾಗಿ ಶಿವನ ಬಳಿಗೆ ಬಂದನು.

"ಪರಶುರಾಮಾ, ಇಂದ್ರನ ನಗರವನ್ನು ದಾನವರು ನಾಶಮಾಡುತ್ತಿದ್ದಾರಂತೆ. ನೀನು ಹೋಗಿ ದಾನವರನ್ನೆಲ್ಲ ಓಡಿಸಿ ಬಂದುಬಿಡು" ಎಂದನು ಶಿವ.



"ಮಹಾದೇವ! ನಿನಗೆ ಗೊತ್ತಿಲ್ಲದ್ದೇನಿದೆ? ದಾನವರು ಮಹಾ ಬಲವಂತರು. ಅವರನ್ನು ನಾನೊಬ್ಬನು ಹೋಗಿ ಹೇಗೆ ಜಯಿಸಬಲ್ಲೆ?" ಎಂದು ಪರಶುರಾಮನು ಶಿವನನ್ನು ಕೇಳಿದನು.

ಆಗ ಶಿವನು ಪರಶುರಾಮನ ಪರಶುವನ್ನು ತೆಗೆದುಕೊಂಡು ಅದರಲ್ಲಿ ತನ್ನ ತೇಜಸ್ಸನ್ನು ಊಡಿಸಿ ಪರಶುರಾಮನಿಗೆ ಕೊಟ್ಟು, "ಈಗ ಹೋಗು" ಎಂದನು.

ಪರಶುರಾಮನು ಶಿವಶಕ್ತಿಯ ಪರಶುವಿನೊಂದಿಗೆ ಇಂದ್ರನ ನಗರಕ್ಕೆ ಹೋಗಿ ಅಲ್ಲಿದ್ದ ದಾನವರನ್ನೆಲ್ಲಾ ಹೊಡೆದೋಡಿಸಿದನು. ಅವನನ್ನು ಇದಿರಿಸಿದವರು ನೆಲ ಹಿಡಿದರು. ಆ ಮೇಲೆ ಇಂದ್ರನಿಗೆ ನಗರವನ್ನು ಒಪ್ಪಿಸಿಕೊಟ್ಟು, ಮತ್ತೆ ಹೋಗಿ ಯಥಾಪ್ರಕಾರ ತಪಸ್ಸಿಗೆ ಕುಳಿತನು.

ಕಡೆಗೆ ಅವನ ಭಕ್ತಿಗೂ ದೀಕ್ಷೆಗೂ ಮೆಚ್ಚಿ ಶಿವನು ಅವನಿಗೆ ಭಾರ್ಗವಾಸ್ತ್ರವನ್ನು ಪ್ರಸಾದಿಸಿ, ಇನ್ನು ತಪಸ್ಸನ್ನು ಸಾಕುಮಾಡುವಂತೆ ಹೇಳಿದನು.

ಪರಶುರಾಮನು ಹಿಮಾಲಯದಿಂದ ಹೊರಟು ತನ್ನ ತಂದೆ ತಾಯಿಗಳನ್ನು ನೋಡಲು ಬರುವಾಗ, ದಾರಿಯಲ್ಲಿ ಒಂದು ಹೆಬ್ಬುಲಿ ಒಬ್ಬ ಬ್ರಾಹ್ಮಣ ಬಾಲನ ಮೇಲೆ ಬೀಳುವ ದೃಶ್ಯವನ್ನು ನೋಡಿದನು. ಬಾಲನನ್ನು ರಕ್ಷಿಸಲು ಪರಶುರಾಮನು ಹುಲಿಯನ್ನು ಬ್ರಹ್ಮಾಸ್ತ್ರದಿಂದ ಹೊಡೆದನು. ಆ ಪೆಟ್ಟಿನಿಂದ ನೆಲಕ್ಕೆ ಹೊರಳಿಬಿದ್ದ ಹುಲಿ, ಒಬ್ಬ ಗಂಧರ್ವನ ರೂಪ ಧರಿಸಿ ಎದ್ದು ನಿಂತಿತು. ಅವನು ಪರಶುರಾಮನಿಗೆ ನಮಸ್ಕರಿಸಿ, ತಾನು ಶಾಪದಿಂದ ಹುಲಿಯಾಗಿದ್ದು, ಈಗ ಬ್ರಹ್ಮಾಸ್ತ್ರದಿಂದ ಶಾಪವಿಮೋಚನೆಯನ್ನು ಕೊಡಿಸಿದುದಕ್ಕೆ ಕೃತಜ್ಞತೆಯನ್ನು ತಿಳಿಸಿ, ತನ್ನ ಲೋಕಕ್ಕೆ ಹೊರಟುಹೋದನು.

ಹೆಬ್ಬುಲಿಯಿಂದ ರಕ್ಷಿಸಲ್ಪಟ್ಟ ಆ ಬಾಲನ ಹೆಸರು ಅಕೃತವ್ರಣ. ಶಾಂತನೆಂಬ ಮುನಿ ಅವನ ತಂದೆಯಾಗಿದ್ದನು. ತಂದೆಯೊಂದಿಗೆ ತೀರ್ಥಯಾತ್ರೆಮಾಡುತ್ತಿದ್ದಾಗ ದಾರಿ ತಪ್ಪಿ ನಿರ್ಜನ ಪ್ರದೇಶದಲ್ಲಿ ಹುಲಿಯ ಬಾಯಿಗೆ ಬೀಳಲಿದ್ದವನನ್ನು ಪರಶುರಾಮನು ರಕ್ಷಿಸಿದ್ದನು. ತನ್ನನ್ನು ಕಾಪಾಡಿದ ಪರಶುರಾಮನನ್ನು ಬಿಡದೆ ಅಕೃತವ್ರಣನು ಅವನ ಸೇವೆಯಲ್ಲೇ ಇರುವೆನೆಂದು ಹೇಳಿದನು. ಅದರಂತೆಯೇ ಅವನು ಪರಶುರಾಮನಿಗೆ ಶಿಷ್ಯನಾಗಿಯೂ ಸ್ನೇಹಿತನಾಗಿಯೂ ಜೀವಿತಾಂತದವರೆಗೂ ಇದ್ದನು.

ಪರಶುರಾಮನು ಅಕೃತವ್ರಣನೊಂದಿಗೆ ಭೃಗುವಿನ ಆಶ್ರಮಕ್ಕೂ, ಔರ್ವನ ಆಶ್ರಮಕ್ಕೂ, ಋಚೀಕನ ಆಶ್ರಮಕ್ಕೂ ಹೋಗಿ ಅಲ್ಲಿನವರಿಗೆಲ್ಲಾ ಸಂತೋಷವನ್ನುಂಟುಮಾಡಿದನು. ಅವನ ಕತೆಯನ್ನು ಕೇಳಿ ಅವರೆಲ್ಲಾ ತುಂಬಾ ಮೆಚ್ಚಿದರು.

—(ಮುಂದುವರಿಯುವುದು)





# ಪರಶುರಾಮ

## ೨

ಹೈಹಯ ವಂಶದವನಾದ ಕಾರ್ತವೀರ್ಯಾರ್ಜುನನೆಂಬ ರಾಜನು ತುಂಬ ಹೆಸರುವಾಸಿಯಾದವನು. ಅವನ ತಂದೆಯ ಹೆಸರು ಕೃತವೀರ್ಯನಾದುದರಿಂದ ಮಗನಿಗೆ ಕಾರ್ತವೀರ್ಯನೆಂಬ ಹೆಸರಾಯಿತು. ಅರ್ಜುನನೆಂಬುದು ಅವನ ನಿಜವಾದ ಹೆಸರು.

ಕಾರ್ತವೀರ್ಯಾರ್ಜುನನ ಕುಮಾರರು ಬಹಳ ದುಷ್ಟರಾಗಿದ್ದರು. ಅವರು ಒಮ್ಮೆ ಅಡವಿಯಲ್ಲಿ ಜಮದಗ್ನಿಯ ಆಶ್ರಮಕ್ಕೆ ಹೋದರು. ಆಶ್ರಮದಲ್ಲಿ ಜಮದಗ್ನಿಯೂ, ಅವನ ಕುಮಾರರೂ ಇರಲಿಲ್ಲ. ಜಮದಗ್ನಿಯ ಹೋಮಧೇನು ಮಾತ್ರ ಕರುವಿನೊಂದಿಗಿದ್ದಿತು. ಕಾರ್ತವೀರ್ಯನ ಕುಮಾರರು ಆ ಹೋಮಧೇನುವನ್ನು ಕರುವಿನೊಂದಿಗೆ ಎಳೆದುಕೊಂಡು ಹೋಗಲು ಪ್ರಯತ್ನಿಸಿದರು. ಎಷ್ಟೇ ಪ್ರಯತ್ನಿಸಿದರೂ ಆ ಧೇನು ಕರುಗಳು ಅವರ ಕೈಗೆ ಸಿಕ್ಕಲಿಲ್ಲ.

ತರುವಾಯ ಕಾರ್ತವೀರ್ಯನು ಸ್ವತಃ ಜಮದಗ್ನಿಯ ಆಶ್ರಮಕ್ಕೆ ಬಂದು, ಅತಿಥಿ ಸತ್ಕಾರಗಳನ್ನೆಲ್ಲಾ ಚೆಂದಾಗಿ ಸ್ವೀಕರಿಸಿ, ಜಮದಗ್ನಿಯ ಹತ್ತಿರವಿರುವ, ಧೇನು ಕೇಳಿದುದನ್ನು ಕೊಡುವಂತಹ ಕಾಮಧೇನುವೇ ಎಂದು ದೃಢಪಡಿಸಿಕೊಂಡನು. ಆಮೇಲೆ ಆ ಗೋವನ್ನು ತನಗೆ ಕೊಟ್ಟುಬಿಡುವಂತೆ ಜಮದಗ್ನಿಯನ್ನು ಕೇಳಿದನು. ಜಮದಗ್ನಿ ಖಂಡಿತವಾಗಿ ನಿರಾಕರಿಸುವುದನ್ನು ಸಹಿಸದೆ ಅವನನ್ನು ಕಡಿದುಕೊಂದು, ಗೋವನ್ನು ಎಳೆದೊಯ್ಯಲು ನೋಡಿದನು. ಅವನಿಗೂ ಆ ಗೋವನ್ನು ಒಯ್ಯಲು ಸಾಧ್ಯವಾಗಲಿಲ್ಲ.

ಆ ಸಮಯದಲ್ಲಿ ಪರಶುರಾಮನು ಆಶ್ರಮದಲ್ಲಿರಲಿಲ್ಲ. ಇದ್ದಕ್ಕಿದ್ದ ಹಾಗೆ ಅವನಿಗೆ ಎದೆಯ ಮೇಲೆ ಕಲ್ಲಿನ ಭಾರಬಿದ್ದ ಹಾಗೆ ತೋರಿತು. ಮನಸ್ಸಿಗೇನೋ ವ್ಯಾಕುಲವೆನಿಸಿತು. ಏನೋ ಕೇಡು ಬಂದಿರಬೇಕೆಂದು ಶಂಕೆಯುಂಟಾಯಿತು. ಅವನಿಗರಿಯದಂತೆಯೇ ಕಾಲುಗಳು ಬೇಗಬೇಗನೆ ಆಶ್ರಮದ ಕಡೆಗೇ ನಡೆದುವು. ಆಶ್ರಮವು ಸಮೀಪಿಸಿದಂತೆ ತಾಯಿಯ ಕಂಠದಿಂದ ಹೊರಡುವ ಕೆಟ್ಟ ರೋದನ ಧ್ವನಿ! ಪರಶುರಾಮನನ್ನು ನೋಡಿ ರೇಣುಕೆ ಕಾರ್ತವೀರ್ಯಾರ್ಜುನನ ಕ್ರೌರ್ಯವನ್ನು ಹೇಳುತ್ತ ಇಪ್ಪತ್ತೊಂದು ಸಾರಿ ಎದೆಯನ್ನು ಹೊಡೆದುಕೊಂಡು ಶೋಕಿಸಿದಳು. ಪರಶುರಾಮನು ತಾಯಿಯನ್ನು ಸಮಾಧಾನ

ಪಡಿಸಿ, ಇಪ್ಪತ್ತೊಂದು ಸಾರಿ ಕ್ಷತ್ರಿಯರನ್ನು ಸಂಹಾರ ಮಾಡುವೆನೆಂದು ಶಪಥ ತೊಡಿದನು. ತನ್ನ ತಂದೆಯ ಶವವನ್ನು ದಹನಮಾಡುವ ಪ್ರಯತ್ನಕ್ಕೆ ತೊಡಗಿದನು. ಅಷ್ಟರೊಳಗೆ ಭೃಗು ಮಹರ್ಷಿ ಅಲ್ಲಿಗೆ ಬಂದು, ಜಮದಗ್ನಿಯ ಮೇಲೆ ಮಂತ್ರ ಜಲವನ್ನು ಸಿಂಪಡಿಸಿದನು. ಕೂಡಲೇ ಜಮದಗ್ನಿ ಬದುಕಿ ಎದ್ದನು.

ಪರಶುರಾಮನು ಮತ್ತೆ ಬದುಕಿದ ತಂದೆಗೆ ಉಪಚಾರಗಳನ್ನು ಮಾಡಿ, ತಾನು ಕ್ಷತ್ರಿಯ ದೌಷ್ಟ್ಯಕ್ಕೆ ಪ್ರತೀಕಾರವಾಗಿ ಇಪ್ಪತ್ತೊಂದು ಸಾರಿ ಪ್ರಪಂಚ ಸುತ್ತಿ ಕ್ಷತ್ರಿಯರನ್ನು ಕೊಲ್ಲುವ ಪ್ರತಿಜ್ಞೆ ಮಾಡಿರುವುದನ್ನು ತಂದೆಗೆ ತಿಳಿಸಿದನು.

ಜಮದಗ್ನಿ ಪರಶುರಾಮನ ಕೋಪವನ್ನು ತಣಿಸಲು ಪ್ರಯತ್ನ ಮಾಡಿದನು. ಆದರೆ ಉದಾಸೀನವಾಗಿದ್ದರೆ ತಪ್ಪು ಮಾಡಿದವರನ್ನು ಪ್ರೋತ್ಸಾಹಿಸಿದಂತಾಗುವುದೆಂದೂ, ಕಾರಣವಿಲ್ಲದೆ ನಿರಾಯಾಸವಾಗಿ ಕೊಲೆ ಮಾಡುವವರನ್ನು ಸುಮ್ಮನೆ ಬಿಡುವುದು ಸರಿಯಲ್ಲವೆಂದೂ ಪರಶುರಾಮನು ವಾದಿಸಿದನು:

ತನ್ನ ಮಗನ ಹಟವನ್ನು ಶಾಂತ ಮಾಡುವುದು ತನ್ನಿಂದಾಗದೆಂದರಿತ ಜಮದಗ್ನಿ, "ಮೊದಲು ನೀನು ಬ್ರಹ್ಮನ ಬಳಿಗೆ ಹೋಗಿ ಎಲ್ಲಾ ಸಂಗತಿ ಹೇಳಿ ಅವನು ಹೇಳಿದಂತೆ ಮಾಡು " ಎಂದು ಹೇಳಿಬಿಟ್ಟನು.

ಪರಶುರಾಮನು ಬ್ರಹ್ಮನ ಬಳಿಗೆ ಹೋಗಿ, ಪ್ರಶ್ನೆಯ ಹಿಂದುಮುಂದುಗಳ ವಿವರಗಳನ್ನು ಹೇಳಿ, ಆತನ ಅಭಿಪ್ರಾಯವೇನೆಂದು ಕೇಳಿದನು. ಬ್ರಹ್ಮನಿಗೂ ಪರಶುರಾಮನ ಘೋರ ಪ್ರತಿಜ್ಞೆ ರುಚಿಸಲಿಲ್ಲ. ಆದರೆ ಅದನ್ನು ಸ್ಪಷ್ಟವಾಗಿ ಹೇಳಲು ಇಷ್ಟವಿಲ್ಲದೆ "ಈಶ್ವರನ ಅನುಗ್ರಹವಿಲ್ಲದೆ ನಿನ್ನ ಪ್ರತಿಜ್ಞೆ ನೆರವೇರಲು ಸಾಧ್ಯವಿಲ್ಲ. ಆದುದರಿಂದ ಶಿವನ ಬಳಿಗೆ ಹೋಗಿ ಕೇಳಿಕೋ" ಎಂದನು.

ಪರಶುರಾಮನು ಸೀದಾ ಶಿವನ ಬಳಿಗೆ ಹೋದನು. ಶಿವನೊಂದಿಗೆ ಪಾರ್ವತಿಯೂ ಇದ್ದಳು. ಪರಶುರಾಮನು ಹೇಳಿದ ಮಾತುಗಳನ್ನು ಕೇಳಿ ಪಾರ್ವತಿ, "ದುಡುಕಿ ಪ್ರತಿಜ್ಞೆಯನ್ನೇನೋ ಮಾಡಿದೆ. ಅದಕ್ಕೆ ತಕ್ಕ ಅಸ್ತ್ರಗಳು ನಿನ್ನಲ್ಲಿಲ್ಲವಲ್ಲಾ! ಅದಕ್ಕೇ ಬಂದೆ



ಯೇನು?" ಎಂದಳು. ಅವಳ ಮಾತು ಕೇಳಿ ಸಂಹಾರ ಕಾರಕನಾದ ಶಿವನು ಮುಗುಳುನಗುತ್ತ, ಪರಶುರಾಮನಿಗೆ ಅಸ್ತ್ರಗಳನ್ನೂ ಕವಚವನ್ನೂ ಕೊಟ್ಟನು.

ಪರಶುರಾಮನು ಶಿವನ ಅನುಜ್ಞೆ ಪಡೆದು ಹಿಂದಿರುಗಿ ಬರುತ್ತ, ಒಂದು ಕೊಳದ ಬದಿಯಲ್ಲಿ ಅಸ್ತ್ರಗಳನ್ನೆಲ್ಲ ಇಟ್ಟು, ಕೊಳದಲ್ಲಿ ಕೈ ಕಾಲು ಮುಖ ತೊಳೆದುಕೊಂಡು ಸಂಧ್ಯಾವಂದನೆಗೆ ತೊಡಗಿ ಜಪ ಮಾಡುತ್ತ ಕುಳಿತನು.

ಆಗ ಯಾರಿಂದಲೋ ಓಡಿಸಿಕೊಂಡು ಬಂದುವುಗಳಂತೆ, ಕೆಲವು ಜಿಂಕೆಗಳು ಅತಿ ವೇಗವಾಗಿ ಓಡಿ ಬಂದು, ಕೊಳವನ್ನು ನೋಡಿ ತಟ್ಟನೆ ನಿಂತು, ನೀರು ಕುಡಿಯಲು ತೊಡಗಿದುವು. ಅವುಗಳನ್ನು ಓಡಿಸಿಕೊಂಡು ಬಂದ ಬೇಟೆಗಾರನು ಪರಶುರಾಮನಿಗೆ ಕಾಣಿಸಲಿಲ್ಲ. ಆದರೆ ಜಿಂಕೆಗಳಲ್ಲಿ ಒಂದು ಗಂಡು ಜಿಂಕೆ ಹೆಣ್ಣು ಜಿಂಕೆಯೊಂದಿಗೆ, "ಇನ್ನು ನಮಗೆ ಭಯವಿಲ್ಲ. ಇಲ್ಲಿ ಜಪಮಾಡುವವನು ಪರಶುರಾಮ. ಇವನು ಅಗಸ್ತ್ಯನ ಆಶ್ರಮಕ್ಕೆ ಹೋಗಿ ಮುಂದಿನ ಅವತಾರವಾದ ಕೃಷ್ಣಾಮೃತ ಸ್ತೋತ್ರವನ್ನು ಕೇಳಿದನಾದರೆ ಇವನಿಗೆ ಕೃಷ್ಣಕವಚವು ಲಭಿಸಿಬಿಡುತ್ತದೆ" ಎಂದು ಹೇಳಿದ ಮಾತುಗಳು ಪರಶುರಾಮನಿಗೆ ಸ್ಪಷ್ಟವಾಗಿ ಕೇಳಿದುವು.

ಅದನ್ನು ಗ್ರಹಿಸಿ ಪರಶುರಾಮನು ನೆಟ್ಟಗೆ ಅಗಸ್ತ್ಯಾಶ್ರಮಕ್ಕೆ ಹೊರಟನು. ದಾರಿಯಲ್ಲಿ ಅವನಿಗೆ ಜಿಂಕೆಗಳನ್ನು ಓಡಿಸಿದ ಬೇಟೆಗಾರನು ಸಿಕ್ಕಿದನು. ಅವನು ಜಿಂಕೆಗಳನ್ನು ಕಾಣದೆ ಸಿಟ್ಟಿನಿಂದ ಪರಶುರಾಮನ ಮೇಲೆ ಏರಿಬರುವುದನ್ನು ನೋಡಿ, ಪರಶುರಾಮನು ಅವನನ್ನು ಕೊಂದು, ಅಗಸ್ತ್ಯಾಶ್ರಮಕ್ಕೆ ಹೋಗಿ ಕೃಷ್ಣ ಸ್ತೋತ್ರವನ್ನು ಕೇಳಿದನು. ಆಗ ಕೃಷ್ಣನು ಪ್ರತ್ಯಕ್ಷವಾಗಿ ಪರಶುರಾಮನಿಗೆ ತನ್ನ ತೇಜಸ್ಸನ್ನು ನೀಡಿದನು. ತರುವಾಯ ಪರಶುರಾಮನು ನರ್ಮದಾನದಿಯಲ್ಲಿ ಸ್ನಾನಮಾಡಿ ಕಾರ್ತವೀರ್ಯನಿರುವ ನಗರಕ್ಕೆ ಹೋದನು. 'ತಾನು ಕಾರ್ತವೀರ್ಯನೊಂದಿಗೆ ಯುದ್ಧವನ್ನು ಕೇಳಬಂದವನೆಂದು ಸುದ್ದಿ ಕಳುಹಿಸಿದನು.



"ಬರಲಿ. ಬ್ರಾಹ್ಮಣನು ಏನು ಕೇಳಿದರೂ ಇಲ್ಲವೆನ್ನಲಾರೆ. ಜಮದಗ್ನಿಯ ಮಗನು ಯುದ್ಧವನ್ನು ಕೇಳುವನೇ? ಕೊಡುತ್ತೇನೆ" ಎಂದು ಕಾರ್ತವೀರ್ಯನಿಂದ ಪ್ರತ್ಯುತ್ತರ ಬಂತು.

ಆಮೇಲೆ ಕಾರ್ತವೀರ್ಯಾರ್ಜುನನು ತನ್ನ ಸೇನೆಯನ್ನೆಲ್ಲಾ ಪರಶುರಾಮನ ಮೇಲೆ ಯುದ್ಧಕ್ಕೆ ಕಳುಹಿಸಿದನು. ಎಲ್ಲಾ ಸೇನೆಯೂ ಪರಶುರಾಮನ ಕೊಡಲಿಗೆ ಬಲಿಯಾಯಿತು.

ಅನಂತರ ಅವನ ಸ್ನೇಹಿತರಾದ ಅನೇಕ ಮಂದಿ ಇತರ ಕ್ಷತ್ರಿಯರು ಬಂದು ಯುದ್ಧ ಮಾಡಿ ಸತ್ತರು. ಮತ್ಸ್ಯರಾಜ, ಮಗಧರಾಜ, ನಿಷಾದರಾಜ, ವಿದರ್ಭ ರಾಜನಾದ ಸೋಮದತ್ತ, ಮಿಥಿಲೆಯ ರಾಜನಾದ ಬೃಹದ್ಬಲ ಮೊದಲಾದವರೆಲ್ಲ ರಣರಂಗದಲ್ಲಿ ಪರಶುರಾಮನಿಂದ ಮಡಿದರು. ಕನ್ಯಾಕುಬ್ಜದ ರಾಜನೂ, ಸೌರಾಷ್ಟ್ರರಾಜನೂ, ಅವಂತಿಯ ಅನೇಕ ಮಂದಿ ವೀರರೂ ಒಂದೇ ಸಾರಿ ಪರುಶುರಾಮನ ಮೇಲೆ ಮುಗಿಬಿದ್ದು ಬಾಣವರ್ಷ ಮಾಡಿದರು. ಪರಶುರಾಮನು ಆ ಬಾಣಗಳೆಲ್ಲವನ್ನೂ ಭಗ್ನಗೊಳಿಸಿ ಅವರೆಲ್ಲರನ್ನೂ ಕೊಂದುಬಿಟ್ಟನು.

ಸುಚಂದ್ರನೆಂಬ ರಾಜನು ಪರಶುರಾಮನ ಮೇಲೆ ಯುದ್ಧಕ್ಕೆ ಬಂದು ಅವನ ಮೇಲೆ ಶಿವನಿಂದ ತಾನು ಪಡೆದ ತ್ರಿಶೂಲವನ್ನೇ ಬೀಸಿದನು. ಅದು ಪುಷ್ಪಮಾಲೆಯಾಗಿ ಪರುಶುರಾಮನ ಕೊರಳನ್ನು ಅಲಂಕರಿಸಿತು. ಆಕ್ಷಣದಲ್ಲಿ ಪರಶುರಾಮನಿಗೆ ಕಾಳೀದೇವಿ ಪ್ರತ್ಯಕ್ಷವಾಗಿ, ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದರೆ ಸುಚಂದ್ರನು ಸಾಯುವನೆಂದು ತಿಳಿಸಿ ಮಾಯವಾದಳು. ಮರುಕ್ಷಣದಲ್ಲಿ ಪರಶುರಾಮನು ಪ್ರಯೋಗಿಸಿದ ಆಗ್ನೇಯಾಸ್ತ್ರದಿಂದ ಸುಚಂದ್ರನು ಸತ್ತನು. ಅನಂತರ ಅವನ ಮಗ ಪುಷ್ಪರಾಕ್ಷನನ್ನೂ ಪರಶುರಾಮನು ಕೊಂದನು.

ಇಷ್ಟು ಮಂದಿ ಸತ್ತ ಮೇಲೆಯೇ ಕಾರ್ತವೀರ್ಯಾರ್ಜುನನು ಸ್ವತಃ ಪರಶುರಾಮನ ಮುಂದೆ ಯುದ್ಧಕ್ಕೆ ಬಂದು ತ್ರಿಶೂಲದಿಂದ ಪರಶುರಾಮನನ್ನು ಮೂರ್ಛೆ ಬೀಳಿಸಿದನು. ಅದನ್ನು ನೋಡಿ ದೇವತೆಗಳೆಲ್ಲಾ ಗಾಬರಿಯಾಗಿ ಶಿವನನ್ನು ಕರೆದುಕೊಂಡು ಬಂದರು. ಶಿವನು ಸಂಜೀವಿನಿಯಿಂದ ಪರಶುರಾಮನನ್ನು ಬದುಕಿಸಿದನು.

ಪರಶುರಾಮನು ಎದ್ದು ಶಿವಕವಚ ಸ್ತೋತ್ರವನ್ನು ಪಠಿಸಿ, ಕಾರ್ತವೀರ್ಯನ ಮೇಲೆ ಬಾಣ ಪ್ರಯೋಗ ಮಾಡಿದನು. ಅದು ಕಾರ್ತವೀರ್ಯಾರ್ಜುನನ ತಲೆಯನ್ನು ಒಡೆದು ಹಾಕಿತು. ಆಮೇಲೆ ಮುಗಿಬಿದ್ದ ಕಾರ್ತವೀರ್ಯನ ಮಗಂದಿರೆಲ್ಲಾ ಪರಶುರಾಮನ ಕೈಯಲ್ಲಿ ಸತ್ತು ಹೋದರು.

—(ಮುಂದುವರಿಯುವುದು)





# ಪರಶುರಾಮ

೩

ವೀರಧೀರ ಶತಕೋಪಿಷ್ಠನಾದ ಪರಶುರಾಮನು ಕಾರ್ತವೀರ್ಯ ಮೊದಲಾದ ಕ್ಷತ್ರಿಯರಾಜರನ್ನು ಕೊಂದು ತಸು ಶಾಂತನಾಗಿ ನರ್ಮದಾ ನದಿಯಲ್ಲಿ ಸ್ನಾನ ಮಾಡಿದನು. ಅನಂತರ ಶಿವನ ದರ್ಶನ ಮಾಡಲು ಕೈಲಾಸಕ್ಕೆ ಹೋದನು. ಶಿವನ ಮಂದಿರದ ದ್ವಾರದಲ್ಲಿದ್ದ ವಿನಾಯಕನು ಅವನನ್ನು ಒಳಕ್ಕೆಬಿಡದೆ ತಡೆದನು. ಸ್ವಲ್ಪ ಹೊತ್ತು ಪರಶುರಾಮ ವಿನಾಯಕರೊಳಗೆ ವಾಗ್ವಾದ ನಡೆಯಿತು. ಕಡೆಗೆ ಕೈ ಕೈಕಲೆತು ಇಬ್ಬರೂ ಮುಷ್ಟಿ ಯುದ್ಧಕ್ಕೆ ಇಳಿದರು. ವಿನಾಯಕನು ಸೊಂಡಿಲಿನಿಂದ ಪರಶುರಾಮನನ್ನೆತ್ತಲು ಏಳು ಊರ್ಧ್ವ ಲೋಕಗಳೂ ಅವನಿಗೆ ಕಂಡುವು. ಆಗ ಪರಶುರಾಮನು ಕೊಡಲಿಯಿಂದ ವಿನಾಯಕನ ಒಂದು ದಂತವನ್ನು ಹೊಡೆದು ಮುರಿಯಲು, ವಿನಾಯಕನು ಏಕದಂತನಾದನು.

ಆ ಉಭಯರ ಗರ್ಜನೆಗಳಿಂದ ಶಿವಪಾರ್ವತಿಯರು ಹೊರಗೆಬಂದರು, ವಿನಾಯಕನ ಅವಸ್ಥೆಯನ್ನು ನೋಡಿ ಪಾರ್ವತಿಗೆ ಸಿಟ್ಟು ಬಂತು. "ನಮ್ಮಿಂದ ದೊಡ್ಡದೊಡ್ಡ ಉಪಕಾರ ಹೊಂದಿದವನು ಒಂದಿಷ್ಟೂ ಕೃತಜ್ಞತೆಯಿಲ್ಲದೆ ನಮ್ಮ ಮಗನ ದಂತ ಮುರಿದನೆ? ಇವನಿಗೆ ಪ್ರತೀಕಾರ ಮಾಡಲೇ ಬೇಕು !" ಎಂದಳು ಪಾರ್ವತಿ.

ಶಿವನು ಉಭಯ ಸಂಕಟದಲ್ಲಿ ಬಿದ್ದು, ವಿಷ್ಣುವಿನ ಕೃಷ್ಣಾವತಾರವನ್ನು ಧ್ಯಾನಿಸಿದನು. ವಿಷ್ಣು ಕೃಷ್ಣಾವತಾರದಿಂದ ಅಲ್ಲಿ ತೋರಿ, ಪಾರ್ವತಿಯ ಕೋಪವು ಶಾಂತವಾಗುವಂತೆ, "ಈ ರಾಮನು ಕೂಡಾ ನಿನ್ನ ಮಗನಂಥವನು ತಾನೆ? ತಾಯಿ ಇಬ್ಬರನ್ನೂ ಕ್ಷಮಿಸುವುದಿಲ್ಲವೆ? ಇದಕ್ಕೆಲ್ಲ ಮೂರನೇಯವರು ಬೇಕೇ? " ಎಂದು ಹೇಳಿದನು. ಪಾರ್ವತಿ ಸಮಾಧಾನಗೊಂಡು ಪರಶುರಾಮನ ಕುಶಲ ವಿಚಾರಿಸಿದಳು.

ಪರಶುರಾಮನು ಶಿವಪಾರ್ವತಿಯರಿಗೆ ನಮಸ್ಕರಿಸಿ ತನ್ನ ಮನೆಗೆ ಹಿಂದಿರುಗಿದನು. ಅವನು ತಂದೆಯೊಂದಿಗೆ ತಾನು ಮಾಡಿದ ಕ್ಷತ್ರಿಯ ವಧೆಯನ್ನು ಕುರಿತು ಹೇಳಿದನು. ಅದನ್ನು ಕೇಳಿ ಜಮದಗ್ನಿ, ಪರಶುರಾಮನು ಕ್ಷತ್ರಿಯ ವಧೆಯ ಪಾಪವನ್ನು ಕಳೆದುಕೊಳ್ಳಲಿಕ್ಕಾಗಿ, ಮಹೇಂದ್ರ ನಗರಕ್ಕೆ ಹೋಗಿ ತಪಸ್ಸು ಮಾಡಬೇಕೆಂದು ಹೇಳಿದನು.

ತಂದೆಯ ಆದೇಶದಂತೆ ಪರಶುರಾಮನು ಮಹೇಂದ್ರ ಪರ್ವತದಲ್ಲಿ ಸ್ವಲ್ಪಕಾಲ ತಪಸ್ಸು ಮಾಡಿದನು. ಅಷ್ಟರಲ್ಲಿ ಅವನಿಗೊಂದು ಕೆಟ್ಟ ಸಮಾಚಾರ ತಿಳಿಯಿತು. ಅದೇನೆಂದರೆ ಕಾರ್ತವೀರ್ಯಾರ್ಜುನನ ಮಗನೊಬ್ಬನು ಜಮದಗ್ನಿಯನ್ನು ಕೊಂದುಬಿಟ್ಟನಂತೆ. ತಾಯಿ ರೇಣುಕೆ ಗಂಡನೊಂದಿಗೆ ಸಹಗಮನ ಮಾಡಿದಳಂತೆ.

ಇದನ್ನು ಕೇಳಿ ಪರಶುರಾಮನಿಗೆ ಸಹಿಸಲಾಗದಷ್ಟು ಕೋಪಬಂತು. ಪ್ರಪಂಚದಲ್ಲಿರುವ ರಾಜರನ್ನೆಲ್ಲಾ ಕೊಂದು ಅವರ ರಕ್ತದಿಂದಲೇ ತಂದೆತಾಯಿಗಳಿಗೆ ತರ್ಪಣಕೊಡುವೆನೆಂದು ಶಪಥಮಾಡಿಕೊಂಡು, ತಪಸ್ಸಿನಿಂದೆದ್ದನು.

ಪರಶುರಾಮನ ಏಟುಗಳಿಂದ ಉಳಿದಿದ್ದ ಕಾರ್ತವೀರ್ಯನ ಮಕ್ಕಳೆಲ್ಲರೂ ಸತ್ತರು. ಆಮೇಲೆ ಕೂಡಾ ಕಣ್ಣಿಗೆ ಬಿದ್ದ ರಾಜರನ್ನೆಲ್ಲಾ ಕೊಂದನು. ಖಾಲಿಯಾದ ಕಾರ್ತವೀರ್ಯನ ನಗರಕ್ಕೇ ಬೆಂಕಿ ಹಚ್ಚಿದನು. ಆ ಬೆಂಕಿಯ ಜ್ವಾಲೆಯನ್ನು ನೋಡುತ್ತಾ ಪರಶುರಾಮನಿಗೆ ತೃಪ್ತಿಯಾಯಿತಂತೆ. ಆದರಿಂದಲೇ ಯಾವುದಾದರೂ ಸುಟ್ಟು ಉರಿದು ಹೋಗುವಾಗ "ಪರಶುರಾಮ ಪ್ರೀತಿಯಾಯಿತು" ಅನ್ನುತ್ತಾರೆ.

ಹೈಹಯ ವಂಶದವರನ್ನೆಲ್ಲಾ ಕೊಂದಾಯಿತು. ಅನೇಕಮಂದಿ ರಾಜರನ್ನೂ ಕೊಂದಾಯಿತು. ಪರಶುರಾಮನ ಕ್ರೋಧಾಗ್ನಿ ಸ್ವಲ್ಪ ಮಟ್ಟಿಗೆ ಶಾಂತವಾಗಿ ತಪಸ್ಸನ್ನು ಪೂರ್ತಿಗೊಳಿಸಬೇಕೆಂದು ತಪೋವನಕ್ಕೆ ಹೋದನು. ಅಲ್ಲಿ ಅವನು ತಪಸ್ಸು ಮಾಡುವುದನ್ನು ತಿಳಿದು ವಿಶ್ವಾಮಿತ್ರನ ಮೊಮ್ಮಗನಾದ ಪರಾವಸು ಎಂಬವನು ಅವನ ಬಳಿಗೆ ಬಂದು, "ಏನಯ್ಯಾ ಪರಶುರಾಮಾ! ರಾಜರಿಗೆ ಹೆದರಿ ಇಲ್ಲಿ ಕುಳಿತು ತಪಸ್ಸು ಮಾಡುವಿಯಾ?" ಎಂದು ಪರಶುರಾಮನನ್ನು ಅವಹೇಳನೆ ಮಾಡಿದನು.

ಪರಾವಸು ಅಷ್ಟರಲ್ಲಿ ತೃಪ್ತನಾಗದೆ, ಪರಶುರಾಮನು ಕೊಲ್ಲದೆ ಬಿಟ್ಟ ವೃದ್ಧರಬಳಿಗೂ, ಯುವಕರ ಬಳಿಗೂ ಹೋಗಿ ಪರಶುರಾಮನು ತಪಸ್ಸುಮಾಡುವ ಸ್ಥಳವನ್ನು ತಿಳಿಸಿ, ಹಗೆತೊಟ್ಟ ಅವರನ್ನು ಯುದ್ಧಕ್ಕೆ



ಕೆರಳಿಸಿದನು. ಆದರಿಂದ ತಪಸ್ಸು ಬಿಟ್ಟಿದ್ದ ಪರಶು ರಾಮನು, ಮತ್ತೆ ತಿರುಗಿ ತಿರುಗಿ ಸಿಕ್ಕಿದ ಕ್ಷತ್ರಿಯ ರನ್ನೆಲ್ಲ ಕೊಂದುಹಾಕಿದನು.

ಆಷ್ಟಾದರೂ ಪರಶುರಾಮನ ಕೈಯಲ್ಲಿ ಎಲ್ಲಾ ಕ್ಷತ್ರಿ ಯರೂ ಸಾಯಲಿಲ್ಲ. ಕೆಲವರು ಹೆಂಗುಸರ ನಡುವಿ ನಲ್ಲಿಯೂ ಪಶುಗಳ ಮಂದೆಯಲ್ಲಿಯೂ ಹುದುಗಿ ತಲೆ ತಪ್ಪಿಸಿಕೊಂಡರು. ಅಂಥವರಿಗೆ ಮಕ್ಕಳು ಹುಟ್ಟಿ ದೊಡ್ಡವರೂ ಆದರು. ಅವರ ಸುಳಿವು ಗೊತ್ತಾ ದಾಗಲೆಲ್ಲಾ ಪರಶುರಾಮನು ಅವರನ್ನು ಹಿಡಿದು ಕೊಲ್ಲುತ್ತಾ, ಲೆಕ್ಕವಿಟ್ಟುಕೊಳ್ಳುತ್ತಾ, ಇಪ್ಪತ್ತೊಂದು ಸಾರಿ ತಿರುಗಿ ಕ್ಷತ್ರಿಯ ಸಂಹಾರಮಾಡುವೆನೆಂಬ ತನ್ನ ಮೊದಲಿನ ಪ್ರತಿಜ್ಞೆಯನ್ನು ಈಡೇರಿಸಿ ಕೊಂಡನು.

ಕ್ಷತ್ರಿಯರ ರಕ್ತವನ್ನೆಲ್ಲಾ ವ್ಯರ್ಥಮಾಡದೆ, ಕುರು ಕ್ಷೇತ್ರದಲ್ಲಿದ್ದ ಐದು ಮಡುಗಳಲ್ಲಿ ತುಂಬಿಸಿ, ಅದ ರಿಂದಲೇ ತಂದೆಗೆ ತರ್ಪಣ ಕೊಟ್ಟನು. ಮಡುಗಳನ್ನು ಶ್ಯಮಂತಕ ಪಂಚಕವೆಂದು ಕರೆಯುತ್ತಾರೆ.

ಪರಶುರಾಮನು ಪಿತೃದೇವತೆಗಳಿಗೆ ತರ್ಪಣ ಕೊಡುವಾಗ ಅವರು ಅವನೊಂದಿಗೆ, "ಅಪ್ಪಾ, ನಿನಗಿನ್ನೂ ಪೂರ್ತಿ ಶಾಪಮುಕ್ತಿಯಾಗಿಲ್ಲ. ಅದಕ್ಕಾಗಿ ನೀನು ಯಾಗಮಾಡಬೇಕು" ಎಂದು ಹೇಳಿದರು.

ಪರಶುರಾಮನು ಮಹೇಂದ್ರ ನಗರಕ್ಕೆ ಹೋಗಿ ಮುನಿಗಳೊಡನೆ ಮಾತಾಡಿ, ಅವರ ಸಹಾಯದಿಂದ ಅಶ್ವಮೇಧಯಾಗವನ್ನು ಪ್ರಾರಂಭಮಾಡಿದನು. ಆ ಯಾಗವನ್ನು ನೋಡಲು ಅನೇಕ ಮುನಿಗಳು ಬಂದರು. ಅವರೊಳಗಿನ ಕೆಲವು ಮುನಿಗಳು, "ಗೋಕರ್ಣವು ಸಮುದ್ರಲ್ಲಿ ಮುಳುಗಿ ಹೋಗುತ್ತಾ ಇದೆ. ಅದನ್ನು ಪರಶುರಾಮನ ಹೊರತು ಬೇರೆ ಯಾರೂ ಕಾಪಾಡ ಲಾರರು" ಎಂದರು.

"ಅಯ್ಯಾ, ನಾನು ಪಿತ್ರಾಜ್ಞೆಯಂತೆ ಯಾಗ ದೀಕ್ಷೆ ಯಲ್ಲಿದ್ದೇನೆ. ಈಗ ಆಯುಧಗಳನ್ನು ಹೇಗೆ ಹಿಡಿಯಲಿ?" ಎಂದನು ಪರಶುರಾಮ.

ಅದನ್ನು ಕೇಳಿ ಶುಷ್ಕನೆಂಬ ಮುನಿ ಮುಖ್ಯ ನೊಬ್ಬ, "ಆಯುಧ ಹಿಡಿಯುವುದರಲ್ಲಿ ತಪ್ಪೇನಿಲ್ಲ;



ಕೆಲಸ ಮುಗಿಸಿ ಬಂದು ಮತ್ತೆ ಯಾಗ ಮಾಡಲೂ ಬಹುದು " ಎಂದನು.

ಆಗ ಪರಶುರಾಮನು ಮುನಿಗಳ ಕೋರಿಕೆಯನ್ನು ಈಡೇರಿಸಲು ಗೋಕರ್ಣಕ್ಷೇತ್ರದ ಬಳಿಯಲ್ಲಿದ್ದ ಸಮುದ್ರ ತೀರಕ್ಕೆ ಹೋಗಿ, ಸಮುದ್ರಾಧಿಪತಿಯಾದ ವರುಣನನ್ನು ಕರೆದನು. ಎಷ್ಟು ಸಾರಿ ಕರೆದರೂ ವರುಣನು ಬರಲಿಲ್ಲ. ಕೂಡಲೇ ಪರಶುರಾಮನು ಆಗ್ನೇಯಾಸ್ತ್ರವನ್ನು ಬಿಲ್ಲಿಗೆ ಸಂಧಿಸಿ ನಾಣೆಳೆಯುವಾಗ ಅದರಿಂದ ಅಗ್ನಿಜ್ವಾಲೆಗಳು ಸಿಡಿಯತೊಡಗಿದುವು.

ಅದನ್ನು ನೋಡಿ ಸಮುದ್ರ ರಾಜನು ಹೆದರುತ್ತಾ ಬಂದು ಪರಶುರಾಮನಿಗೆ ಶರಣಾಗತನಾಗಿ, "ನಾನು ಎಷ್ಟು ದೂರ ಹಿಂದೆ ಹೋಗಬೇಕೆಂದು ಅಪ್ಪಣೆ ಕೊಡು, ಹೋಗುತ್ತೇನೆ" ಎಂದನು.

ರಾಮನು ತನ್ನ ಕೈಯಲ್ಲಿದ್ದ ಸ್ರುವವೆಂಬ ಕೊಡಲಿ ಯನ್ನು ಎತ್ತಿ ಸಮುದ್ರದ ಮೇಲೆ ಬಿಸುಟನು. ಅದು ಎಷ್ಟು ದೂರದಲ್ಲಿ ಬಿತ್ತೋ ಅಷ್ಟು ದೂರದವರೆಗೆ ಹಿಂದೆ ಹೋಗಲು ಹೇಳಿದನು. ಅದು ಎರಡು ಯೋಜನ ದೂರದಲ್ಲಿ ಹೋಗಿ ಬಿತ್ತು. ಸಮುದ್ರವು ಅಷ್ಟು ದೂರದವರೆಗೆ ಹಿಂದೆ ಹೋಯಿತು.

ಪರಶುರಾಮನು ಮಹೇಂದ್ರ ನಗರದಲ್ಲಿ ಆಶ್ರಮ ದಲ್ಲಿರುವಾಗ ಕರ್ಣನು ಅವನ ಬಳಿಗೆ ಬಂದು, ತಾನು ಬ್ರಾಹ್ಮಣನೆಂದು ಹೇಳಿಕೊಂಡು ವಿದ್ಯಾರ್ಥಿಯಾಗಿ ಸೇರಿದನು. ಪರಶುರಾಮನು ಅವನಿಗೆ ಬ್ರಹ್ಮಾಸ್ತ್ರ ವನ್ನೂ ಉಪದೇಶ ಮಾಡಿದನು.

ಒಂದುದಿನ ಪರಶುರಾಮನು ಕರ್ಣನ ತೊಡೆಯ ಮೇಲೆ ತಲೆಯಿಟ್ಟು ನಿದ್ದೆಯಲ್ಲಿರುವಾಗ, ಒಂದು ತುಂಬೀ ಹುಳು ಕರ್ಣನ ತೊಡೆಯನ್ನು ಕೊರೆಯ ತೊಡಗಿತು. ಅದರ ಗಾಯದಿಂದ ರಕ್ತ ಸುರಿಯು ತ್ತಿದ್ದರೂ ಕರ್ಣನು ಕದಲದೆ ಸಹಿಸಿಕೊಂಡಿದ್ದನು.

ಆದರೆ ರಕ್ತವು ಪರಶುರಾಮನ ಶರೀರಕ್ಕೆ ಬಿದ್ದು ದರಿಂದ ಅವನಿಗೆ ನಿದ್ರಾಭಂಗವಾಗಿ, "ಏನಿದು ? ಇಷ್ಟು ದೊಡ್ಡ ಗಾಯದಿಂದ ಹೀಗೆ ರಕ್ತ ಸುರಿಯು ತ್ತಿದ್ದರೂ ಸಹಿಸಿಕೊಂಡಿದ್ದೆಯೆಂದರೆ, ನೀನು ಬ್ರಾಹ್ಮಣನೇ ಅಲ್ಲ. ಕ್ಷತ್ರಿಯನೇ ನಿಜ! ನನ್ನಿಂದ ವಿದ್ಯೆ ಕಲಿಯಲು ಸುಳ್ಳು ಹೇಳಿದೆಯಾ?" ಎಂದು ಮಹಾ ಕೋಪಿಷ್ಠನಾದ ಪರಶುರಾಮನು, ತಾನು ಅವನಿಗೆ ಕಲಿಸಿದ ಅಸ್ತ್ರ ವಿದ್ಯೆಗಳು ಸಮಯಕ್ಕೆ ಮರೆತು ಹೋಗಲೆಂದು ಶಪಿಸಿದನು. ಕ್ಷತ್ರಿಯರನ್ನೆಲ್ಲಾ ಕೊಂದು ಅವರ ರಾಜ್ಯಗಳನ್ನೆಲ್ಲಾ ವಶಪಡಿಸಿಕೊಂಡ ಪರಶು ರಾಮನು, ತನಗೆ ಸಿಕ್ಕಿದ ಭೂಮಿಯನ್ನೆಲ್ಲಾ ಕಶ್ಯಪನಿಗೆ ದಾನಮಾಡಿಬಿಟ್ಟನು. ದಾನಮಾಡಿದ ಭೂಮಿಯಿಂದ ಪರಶುರಾಮನು ಹೊರಟುಹೋಗ ಬೇಕಾಯಿತು. ಪರಶುರಾಮನು ದಕ್ಷಿಣ ಸಮುದ್ರ ದಾಟಿ ಹೊರಟು ಹೋಗಿ ಚಿರಂಜೀವಿಯಾಗಿರುವನು.—(ಮುಗಿಯಿತು)

